Vol - 12 April 2014 Issue No. 04 ₹ 10.00/-






# ಕರ್ನಾಟಕ ಸ್ಕೌಟ್ ಮತ್ತು ಗೈಡ್

ಮಾಸಿಕ ವಾರ್ತಾಪತ್ರಿಕೆ

# Karnataka Scout & Guide

*Monthly News Magazine*






ಶಿವಮೊಗ್ಗ ಜಿಲ್ಲೆ ಅಮಟೆಕೊಪ್ಪದ ಹೊಂಗಿರಣ ಶಾಲೆಯಲ್ಲಿ ನಡೆದ ಜಿಲ್ಲಾ ಮಟ್ಟದ ಕ್ಯಾಂಪೋರಿಯಲ್ಲಿ ರಾಜ್ಯ ವಿಧಾನಸಭಾಧ್ಯಕ್ಷರಾದ ಸನ್ಮಾನ್ಯ ಶ್ರೀ ಕಾಗೋಡು ತಿಮ್ಮಪ್ಪರವರಿಗೆ ಜಿಲ್ಲಾ ಮುಖ್ಯ ಆಯುಕ್ತ ಶ್ರೀ ಹೆಚ್.ಡಿ ರಮೇಶ್ ಶಾಸ್ತ್ರಿ ನೆನಪಿನ ಕಾಣಿಕೆ ನೀಡುತ್ತಿರುವುದು. ರಾಜ್ಯ ಮುಖ್ಯ ಆಯುಕ್ತರಾದ ಶ್ರೀ ಕೊಂಡಜ್ಜಿ ಬ. ಷಣ್ಮುಖಪ್ಪ, ಸಾಗರ ಉಪವಿಭಾಗಧಿಕಾರಿಗಳಾದ ಡಾ॥ ಉದಯಕುಮಾರ್ ಶೆಟ್ಟಿ, ಜಿಲ್ಲಾ ಸ್ಕೌಟ್ ಆಯುಕ್ತ ಶ್ರೀ ಎಸ್. ಉಮೇಶ್ ಶಾಸ್ತ್ರಿ, ಜಿಲ್ಲಾ ಕಾರ್ಯದರ್ಶಿ ಶ್ರೀ ಕೆ.ಪಿ. ಬಿಂದು ಕುಮಾರ್, ರಾಜ್ಯ ಸ್ಥಾನಿಕ ಆಯುಕ್ತೆ ಶ್ರೀಮತಿ ಎಸ್.ಕೆ. ಪ್ರಭ ಹಾಗೂ ಜಿಲ್ಲಾ ಸಂಸ್ಥೆಯ ಮತ್ತು ಸ್ಥಳೀಯ ಸಂಸ್ಥೆಯ ಪದಾಧಿಕಾರಿಗಳು ಚಿತ್ರದಲ್ಲಿದ್ದಾರೆ.



ೀಚೆಗೆ ಚಿತ್ರದುರ್ಗದಲ್ಲಿ ನಡೆದ ಮುಕ್ತದಳಗಳ ರಾಜ್ಯ ಮಟ್ಟದ ಮೇಳದ ದ್ಘಾಟನೆಯನ್ನು ಚಿತ್ರದುರ್ಗ ಮುರುಘಾ ಮಠದ ಶ್ರೀಶ್ರೀಶ್ರೀ ಶಿವಮೂರ್ತಿ ರುಘರಾಜೇಂದ್ರ ಶರಣರು ಗಿಡಕ್ಕೆ ನೀರು ಹಾಕುವ ಮೂಲಕ ವೇರಿಸಿದರು. ಶ್ರೀ ರವಿಶಂಕರರೆಡ್ಡಿ, ಕ್ಷೇತ್ರ ಶಿಕ್ಷಣಾಧಿಕಾರಿಗಳು ರಾಜ್ಯ ಗೂ ಜಿಲ್ಲಾ ಸಂಸ್ಥೆ ಪದಾಧಿಕಾರಿಗಳು ಚಿತ್ರದಲ್ಲಿದ್ದಾರೆ.



ಉಡುಪಿಯಲ್ಲಿ ಜರುಗಿದ ಬನ್ನಿ ಲೀಡರ್ ತರಬೇತಿ ಶಿಬಿರದ ಸಮಾರೋಪ ಸಮಾರಂಭದಲ್ಲಿ ಶ್ರೀಮತಿ ಶಾಂತಾ ವಿ. ಆಚಾರ್ಯ, ರಾಜ್ಯ ಆಯುಕ್ತರು (ಗೈಡ್ಸ್) ಮಾತನಾಡುತ್ತಿರುವುದು. ಚಿತ್ರದಲ್ಲಿ ಶಿಬಿರದ ನಾಯಕಿ ಮತ್ತು ರಾಷ್ಟ್ರೀಯ ಸಂಸ್ಥೆಯ ಮಾಜಿ ನಿರ್ದೇಶಕಿ ಶ್ರೀಮತಿ ಪಿ. ಸರೋಜ, ಜಿಲ್ಲಾ ಕಾರ್ಯದರ್ಶಿ ಶ್ರೀ ಶೇಖರ್ ಪೂಜಾರಿ, ಜಿಲ್ಲಾ ಆಯುಕ್ತರುಗಳಾದ ಶ್ರೀ ಎಡ್ವಿನ್ ಆಳ್ವ, ಶ್ರೀಮತಿ ರಾಜಲಕ್ಷ್ಮಿ ಡಿ. ಶೆಟ್ಟಿ ಅವರುಗಳನ್ನು ಕಾಣಬಹುದು.



29-03-2014ರಂದು ಚಿಕ್ಕಬಳ್ಳಾಪುರ ಜಿಲ್ಲೆ ಗೌರಿಬಿದನೂರಿನ ಸರ್ಕಾರಿ ಪ್ರಥಮ ದರ್ಜೆ ಕಾಲೇಜಿನಲ್ಲಿ ರೋವರ್ಸ್ ಮತ್ತು ರೇಂಜರ್ಸ್ ಘಟಕಗಳನ್ನು ಉದ್ಘಾಟಿಸಲಾಯಿತು. ಶ್ರೀ ಹನುಮಂತರೆಡ್ಡಿ, ಪ್ರಾಚಾರ್ಯರು, ಶ್ರೀ ಎನ್. ಶ್ರೀನಿವಾಸನ್, ರಾಜ್ಯ ಸ್ಥಾನಿಕ ಆಯುಕ್ತರು (ಪ್ರಕಟಣೆ) ಹಾಗೂ ಜಿಲ್ಲಾ ಸಂಯೋಜಕರು, ಶ್ರೀ ಪ್ರವೀಣ್, ರೋವರ್ ಲೀಡರ್, ಡಾ. ರಾಧಿಕ, ರೇಂಜರ್ ಲೀಡರ್, ಶ್ರೀ ಮನೋಹರ, ಜಿಲ್ಲಾ ಕಾರ್ಯದರ್ಶಿ, ಶ್ರೀ ವಿಶ್ವನಾಥ್, ಜಿಲ್ಲಾ ಸಂಘಟಕ ಇವರುಗಳು ಚಿತ್ರದಲ್ಲಿದ್ದಾರೆ.



6-02-2014ರಂದು ಹಾವೇರಿ ಜಿಲ್ಲೆ ರಾಣೆಬೆನ್ನೂರಿನ ಸರ್ಕಾರಿ ಪ್ರಥಮ ದರ್ಜೆ ಕಾಲೇಜಿನಲ್ಲಿ ರೋವರ್ಸ್ ಮತ್ತು ರೇಂಜರ್ಸ್ ಘಟಕಗಳನ್ನು ಉದ್ಘಾಟಿಸಲಾಯಿತು. ಶ್ರೀ ಬಿ.ಆರ್. ವಾಲೀದ್, ಪ್ರಾಚಾರ್ಯರು, ಡಾ. ಮಹದೇವಿ, ರೇಂಜರ್ ಲೀಡರ್ ಮತ್ತು ಜಿಲ್ಲಾ ಸಂಘಟನಾ ಆಯುಕ್ತ ಶ್ರೀ ಶೇಖ್ ಸುರಣಗಿ ಅವರುಗಳು ಚಿತ್ರದಲ್ಲಿದ್ದಾರೆ.



ಗುಲ್ಬರ್ಗದಲ್ಲಿ ನಡೆದ ಸ್ಥಾಪಕರ ದಿನಾಚರಣೆಯ ಅಂಗವಾಗಿ ಬಿ.ಪಿ. ಹಾಗೂ ಲೇಡಿ ಬಿ.ಪಿ. ಅವರ ಭಾವ ಚಿತ್ರಗಳಿಗೆ ಮಾಲಾರ್ಪಣೆ ಮಾಡುತ್ತಿರುವ ಶ್ರೀ ಪರಮೇಶ್, ಉಪನಿರ್ದೇಶಕರು, ಸಾ.ಶಿ. ಇಲಾಖೆ ಮತ್ತು ಶ್ರೀಮತಿ ಜಯಶ್ರೀ ಗೋಗಿ, ಪ್ರಾಚಾರ್ಯರು, ಬಾಲಕರ ಪ.ಪೂ. ಕಾಲೇಜು ಗುಲ್ಬರ್ಗ ಹಾಗೂ ಜಿಲ್ಲಾ ಸಂಸ್ಥೆ ಪದಾಧಿಕಾರಿಗಳು ಚಿತ್ರದಲ್ಲಿದ್ದಾರೆ.



ದಕ್ಷಿಣ ಕನ್ನಡ ಜಿಲ್ಲೆಯ ಸುರತ್ಕಲ್ ಸ್ಥಳಿಯ ಸಂಸ್ಥೆ ವತಿಯಿಂದ ನಡೆದ "ಕೃಷಿ ಕ್ಷೇತ್ರ ಅಧ್ಯಯನ" ಕಾರ್ಯಕ್ರಮದಲ್ಲಿ ಸ್ಥಳೀಯ ಸಂಸ್ಥೆ ಅಧ್ಯಕ್ಷರು ಹಾಗೂ ಕೃಷಿಕರೂ ಆದ ಶ್ರೀ ಗೋಪಾಲಕೃಷ್ಣ ಪ್ರಭು ಅವರು ತಮ್ಮ ನಿವಾಸದಲ್ಲಿ ಕೃಷಿ ಚಟುವಟಿಕೆಗಳ ಬಗ್ಗೆ ಮಾಹಿತಿ ನೀಡುತ್ತಿರುವುದು.



24-02-2014ರಂದು ಬಳ್ಳಾರಿ ಜಿಲ್ಲೆಯ ಸಿರಗುಪ್ಪದಲ್ಲಿ ತಾಲ್ಲೂಕು ಮಟ್ಟದ ಮೇಳ ಮತ್ತು ಸ್ಥಾಪಕರ ದಿನಾಚರಣೆ ಆಚರಿಸಲಾಯಿತು. ಕ್ಷೇತ್ರ ಶಿಕ್ಷಣಾಧಿಕಾರಿ ಶ್ರೀ ಕೆ.ವಿ. ಶ್ರೀನಿವಾಸಮೂರ್ತಿ, ಜಿಲ್ಲಾ ಪಂಚಾಯತ್ ಸದಸ್ಯರಾದ ಶ್ರೀ ದಮ್ಮೂರ ಸೋಮಪ್ಪ ಹಾಗೂ ಇತರರು ಚಿತ್ರದಲ್ಲಿದ್ದಾರೆ.




08-03-2014ರಂದು ಚಿತ್ರದುರ್ಗ ಜಿಲ್ಲೆಯ ಹೊಳಲ್ಕೆರೆಯಲ್ಲಿ ಒನಕೆ ಓಬವ್ವ ಗೈಡ್ ಕಂಪನಿ ವತಿಯಿಂದ ಅಂತರಾಷ್ಟ್ರೀಯ ಮಹಿಳಾ ದಿನಾಚರಣೆ ಆಚರಿಸಲಾಯಿತು. ಶ್ರೀ ಎನ್.ಬಿ. ಮಲ್ಲಪ್ಪ, ಮುಖ್ಯೋಪಾಧ್ಯಾಯರು, ಶ್ರೀ ಪಿ.ಕೆ. ರಾಜಪ್ಪ, ದೈಹಿಕ ಶಿಕ್ಷಣಾಧಿಕಾರಿಗಳು, ಶ್ರೀಮತಿ ವಾಹಿದಾ ಬೇಗಂ, ಗೈಡ್ ಕ್ಯಾಪ್ಟನ್ ಹಾಗೂ ಇತರರನ್ನು ಚಿತ್ರದಲ್ಲಿ ಕಾಣಬಹುದು.

# *EDITORIAL............*

*"A brave man acknowledges the strength of others."*

*Friends, it is indeed 'good feelings and motivation' which gets boosted when we are awarded by institutions, organizations and by Government / top level brass for the work we have done or sometimes for the contribution our group has done. I have come across such feeling many a time in my life and especially being a Scout, receiving the awards and accolades from organizations both within the country and beyond India.*

*I always look at some of the great leaders or contributors who have contributed and done enough to support the cause of Scouting/ Guiding. Unfortunately some of them are neither recognized nor given a rightful place they deserve. This perhaps shows that we are scared of volunteers or professionals who really matter.Reasons are not far to seek and primarily being - will I lose my importance by recognizing or awarding someone. This sort of feelings in some of us obviously gives place leading to selfishness and as a result I am afraid ,we are losing good volunteers/ professionals from Scouting/ Guiding.*

*I go with the quote "A brave man acknowledges the strength of others." Not only should we feel inwardly but should also be brave enough to applaud and appreciate the work of others; their contribution should be recognized and when right time comes award them with claps, pats, pins, medals and certificates. The recognition or awards doesn't mean money and increments, silver or gold, it means simply telling well done and we need more such deeds from others.*

*Recently I came across a leader who is in the moment for the last over 7 decades but to his ill-luck he is still to be rightfully recognized. He has a feeling of being let down and rightfully so; because he sees around him, many getting recognized and awarded for rendering much less service and contribution . This particular individual as a case in point might have been hurt but fortunately I also see many individuals who keep serving the movement and rendering valuable service without any expectations. Further the smiles and service which individuals put in the organization is to make it one of the best and to serve young people.*

*The management and key top level leaders in an organization should never fail to recognize the upcoming leaders and also applaud the leaders who have done commendable services. Bringing smiles on others faces is the good turn of our time and let us be brave in awarding the right persons at right time.*

*Wish you all the best.*

***M.A. KHALID***
*State Secretary*

# ರಾಜ್ಯ ಮುಖ್ಯ ಆಯುಕ್ತರ ನುಡಿ..........................

ಆತ್ಮೀಯರೆ,

ಈ ತಿಂಗಳ 19ನೇ ತಾರೀಕಿನಿಂದ 29ರ ವರೆವಿಗೆ ಕೊಂಡಜ್ಜಿ ಮತ್ತು ಡಾ॥ ಆನಿಬೆಸೆಂಟ್ ತರಬೇತಿ ಕೇಂದ್ರಗಳಲ್ಲಿ ರಾಷ್ಟ್ರಪತಿ ಪೂರ್ವಸಿದ್ಧತಾ ಶಿಬಿರಗಳನ್ನು ಏರ್ಪಡಿಸಿದ್ದು, ಈಗಾಗಲೇ ಕೊಂಡಜ್ಜಿ ಶಿಬಿರ ಮುಗಿದಿದ್ದು, ದೊಡ್ಡಬಳ್ಳಾಪುರದಲ್ಲಿ ತರಬೇತಿ ನಡೆಯುತ್ತಿದೆ. ನನ್ನ ಗಮನಕ್ಕೆ ಬಂದಿರುವಂತೆ ಕೊಂಡಜ್ಜಿ ಶಿಬಿರದಲ್ಲಿ ಪಾಲ್ಗೊಳ್ಳಲು ಅವಕಾಶವಿದ್ದ ಒಟ್ಟು ಅಭ್ಯರ್ಥಿಗಳ 50% ಮಾತ್ರ ಹಾಜರಾಗಿರುತ್ತಾರೆ. ದೊಡ್ಡಬಳ್ಳಾಪುರದ ಶಿಬಿರದಲ್ಲಿ ಪಾಲ್ಗೊಂಡಿರುವ ಒಟ್ಟು ಅಭ್ಯರ್ಥಿಗಳ ಸಂಖ್ಯೆ ಪಾಲ್ಗೊಳ್ಳಲು ಅವಕಾಶವಿದ್ದ ಅಭ್ಯರ್ಥಿಗಳ 40%ರಷ್ಟಿದೆ. ಯಾವ ಕಾರಣಗಳಿಂದ ಮೇಲ್ಕಂಡ ತರಬೇತಿ ಶಿಬಿರದಲ್ಲಿ ಪಾಲ್ಗೊಳ್ಳಲು ಅರ್ಹರಿದ್ದ ಅಭ್ಯರ್ಥಿಗಳು ಹೆಚ್ಚಿನ ಸಂಖ್ಯೆಯಲ್ಲಿ ಭಾಗವಹಿಸಲು ಸಾಧ್ಯವಾಗಲಿಲ್ಲ ಎಂಬುದನ್ನು ರಾಜ್ಯ ಸಂಸ್ಥೆಯ ಸಂಘಟನಾ ಮತ್ತು ತರಬೇತಿ ಆಯುಕ್ತರುಗಳು ಹಾಗು ಜಿಲ್ಲೆಗಳಲ್ಲಿನ ತರಬೇತಿ ಆಯುಕ್ತರುಗಳು – ತರಬೇತಿ ನಾಯಕರುಗಳು ಹಾಗು ಜಿಲ್ಲಾ ಪದಾಧಿಕಾರಿಗಳು ಪರಿಶೀಲಿಸಬೇಕಾದ್ದು ಅಗತ್ಯ ಹಾಗೂ ಅನಿವಾರ್ಯ ಎಂಬುದನ್ನು ನಿಮ್ಮಗಳೆಲ್ಲರ ಗಮನಕ್ಕೆ ತರಬಯಸುತ್ತೇನೆ. ಈ ಬಗ್ಗೆ ದಿನಾಂಕ:30 ಏಪ್ರಿಲ್ 2014ರಂದು ಡಾ॥ ಆನಿಬೆಸೆಂಟ್ ತರಬೇತಿ ಕೇಂದ್ರದಲ್ಲಿ ಕರೆದಿರುವ ರಾಜ್ಯದ ಎಲ್ಲಾ ಜಿಲ್ಲೆಗಳ ಕಾರ್ಯದರ್ಶಿಗಳ ಹಾಗು ಎಎಸ್‌ಓಸಿ/ ಡಿಓಸಿ / ಡಿಓಗಳ ಸಭೆಯಲ್ಲಿ ಚರ್ಚಿಸಿ – ಮುಂದಿನ ವರ್ಷ ರಾಜ್ಯ ಸಂಸ್ಥೆ ಏರ್ಪಡಿಸುವ ರಾಷ್ಟ್ರಪತಿ ಪೂರ್ವಭಾವಿ ತರಬೇತಿ ಶಿಬಿರಕ್ಕೆ ಹೆಚ್ಚಿನ ಸಂಖ್ಯೆಯಲ್ಲಿ ಅರ್ಹ ಅಭ್ಯರ್ಥಿಗಳು ಹಾಜರಾಗುವಂತೆ ಮಾಡುವ ಬಗ್ಗೆ ರಾಜ್ಯ ಹಾಗು ಜಿಲ್ಲಾ ಸಂಸ್ಥೆಗಳು ತೆಗೆದುಕೊಳ್ಳಬೇಕಾದ ಕ್ರಮದ ಬಗ್ಗೆ ತೀರ್ಮಾನಿಸಬೇಕಾಗಿದೆ.

ನಿಮಗೆ ತಿಳಿದಿರುವಂತೆ, ಹಲವು ಜಿಲ್ಲೆಗಳಿಂದ ಶಿಬಿರದಲ್ಲಿ ಪಾಲ್ಗೊಳ್ಳಲು ಅರ್ಹರಿದ್ದರೂ, ಯಾರೂ ಹಾಜರಿರದಿರುವುದು ಮತ್ತು ಕೆಲವು ಜಿಲ್ಲೆಗಳಿಂದ ಶಿಬಿರದಲ್ಲಿ ಭಾಗವಹಿಸಬೇಕಾದ ಸಂಖ್ಯೆಗೂ ಹಾಗು ಹಾಜರಿರುವವರ ಸಂಖ್ಯೆಗೂ ಬಹಳಷ್ಟು ಅಂತರವಿದ್ದು, ಈ ಅಂತರವನ್ನು ಕಡಿಮೆ ಮಾಡುವ ಬಗ್ಗೆ ಹಾಗು ಹೆಚ್ಚಿನ ಸಂಖ್ಯೆಯಲ್ಲಿ ಅರ್ಹ ಅಭ್ಯರ್ಥಿಗಳು ಪೂರ್ವ ತರಬೇತಿ ಶಿಬಿರದಲ್ಲಿ ಭಾಗವಹಿಸುವಂತೆ ಜಿಲ್ಲೆಗಳು ಮತ್ತು ರಾಜ್ಯ ಸಂಸ್ಥೆ ತೆಗೆದುಕೊಳ್ಳಬೇಕಾದ ಕ್ರಮಗಳ ಬಗ್ಗೆ ಚರ್ಚಿಸಬೇಕೆಂದು ಸೂಚಿಸುತ್ತೇನೆ.

ಕಳೆದ ಎರಡು–ಮೂರು ವರ್ಷಗಳಿಂದ ಹಲವು ಜಿಲ್ಲಾ ಸಂಸ್ಥೆಗಳು ಮೂಲತರಬೇತಿ ಶಿಬಿರಗಳನ್ನು ಏರ್ಪಡಿಸುವಲ್ಲಿ ವಿಫಲವಾಗಿದ್ದು, ರಾಜ್ಯ ಸಂಸ್ಥೆ ಆ ಜಿಲ್ಲೆಗಳಿಗೆ ನೀಡಿದ ವಾರ್ಷಿಕ ದಳ–ಘಟಕಗಳ ಸಂಖ್ಯೆಯನ್ನು ಮುಟ್ಟಲಾಗಿಲ್ಲ. ಈಗಾಗಲೇ ನನ್ನ ಪ್ರತಿ ತಿಂಗಳ ಮಾತುಗಳಲ್ಲಿ, ಜಿಲ್ಲೆಗಳಿಗೆ ಭೇಟಿನೀಡಿದ ಸಂಧರ್ಭದಲ್ಲಿ – ತರಬೇತಿ ಶಿಬಿರಗಳಲ್ಲಿ, ದೂರವಾಣಿ ಮುಖೇನ ಜಿಲ್ಲಾ ಪದಾಧಿಕಾರಿಗಳಿಗೆ – ಜಿಲ್ಲೆಗಳ ಸಂಘಟಕರುಗಳಿಗೆ – ತರಬೇತಿ ನಾಯಕರುಗಳಿಗೆ ಹಾಗು ಎಲ್ಲಾ ಸಂಧರ್ಭಗಳಲ್ಲಿಯೂ ನಾನು ಪದೇಪದೇ ಪ್ರತಿವರ್ಷ ಎಲ್ಲಾ ಜಿಲ್ಲಾ ಸಂಸ್ಥೆಗಳೂ – ಒಂದು ಮೂಲ ಸ್ಕೌಟ್–ಕಬ್, ಗೈಡ್–ಬುಲ್‌ಬುಲ್ ತರಬೇತಿ ಕಾರ್ಯಕ್ರಮ ನಡೆಸಬೇಕಾದ ಅನಿವಾರ್ಯತೆಯುನ್ನು ಹಂಚಿಕೊಂಡಿದ್ದೇನೆ. ಆದರೂ ಹಲವು ಜಿಲ್ಲಾ ಸಂಸ್ಥೆಗಳು ಈ ಬಗ್ಗೆ ಕ್ರಮತೆಗೆದುಕೊಂಡಿಲ್ಲದಿರುವುದು ನನ್ನ ಗಮನಕ್ಕೆ ಬಂದಿದೆ. ಮತ್ತೊಂದು ಮಾತು, ಹಲವು ಜಿಲ್ಲಾ ಸಂಸ್ಥೆಗಳು ತಾವು ಹೋದ ವರ್ಷ ನೀಡಿದ ದಳ–ಘಟಕಗಳ ಸಂಖ್ಯೆಗಿಂತಲೂ ಈ ವರ್ಷದಲ್ಲಿ ಕಡಿಮೆಯಾಗಿರುವುದನ್ನು ಗಮನಿಸಿರುತ್ತೇನೆ. ಇದು ನೇರವಾಗಿ ಸಂಬಂಧಪಟ್ಟ ಜಿಲ್ಲೆಗಳಲ್ಲಿ ರಾಜ್ಯ ಸಂಸ್ಥೆಯ ಪ್ರತಿನಿಧಿಯಾಗಿ ಕಾರ್ಯನಿರ್ವಹಿಸುತ್ತಿರುವ ಎಎಸ್‌ಓಸಿ /ಡಿಓಸಿ/ ಡಿಓಗಳು ತಮ್ಮ ಕರ್ತವ್ಯ ಹಾಗು ಜವಾಬ್ದಾರಿಗಳನ್ನು ಸೂಕ್ತ ರೀತಿಯಲ್ಲಿ ಪಾಲಿಸದಿರುವುದು ಎಂದು ಭಾವಿಸುತ್ತೇನೆ. ಆದುದರಿಂದ ರಾಜ್ಯದ ಎಲ್ಲಾ ಜಿಲ್ಲೆಗಳ ಸ್ಕೌಟ್–ಗೈಡ್ ಜಿಲ್ಲಾ ಸಂಘಟಕರುಗಳಿಗೆ ನನ್ನ ಸೂಚನೆ – 2014–15ರಲ್ಲಿ ನಿಮ್ಮ ಜಿಲ್ಲೆಗಳಲ್ಲಿ ತರಬೇತಿ ಶಿಬಿರಗಳನ್ನು ಏರ್ಪಡಿಸುವ ಸಂಪೂರ್ಣ ಹೊಣೆಗಾರಿಕೆ ನಿಮ್ಮದಾಗಿರುತ್ತದೆ.

ಈ ಬಗ್ಗೆ ನಾನು ಮತ್ತು ರಾಜ್ಯ ಸಂಸ್ಥೆಯ ಪದಾಧಿಕಾರಿಗಳು ಪದೇಪದೇ ಹಲವಾರು ಸಭೆ–ಸಮಾರಂಭ–ಸಮಾವೇಶದಲ್ಲಿ ಎಲ್ಲಾ ಜಿಲ್ಲಾ ಸಂಸ್ಥೆಗಳು – ಪ್ರತಿವರ್ಷ ಮೂಲತರಬೇತಿ ಶಿಬಿರಗಳನ್ನು ಏರ್ಪಡಿಸಬೇಕಾದ

ಅನಿವಾರ್ಯತೆಯನ್ನು ಸಂಸ್ಥೆಯ ಎಲ್ಲಾ ಹಂತಗಳ ಸಹೋದ್ಯೋಗಿ ಮಿತ್ರರಿಗೆ, ತರಬೇತಿ ನಾಯಕ – ನಾಯಕಿಯರುಗಳಿಗೆ – ರಾಜ್ಯ ಮತ್ತು ಜಿಲ್ಲೆಗಳ ಸಂಘಟನೆಗೆ ಸಂಬಂಧಪಟ್ಟವರಿಗೆ – ಅನೇಕ ಸಂಧರ್ಭಗಳಲ್ಲಿ ತರಬೇತಿ ಶಿಬಿರವನ್ನು ಜಿಲ್ಲಾ ಸಂಸ್ಥೆಗಳು ಪ್ರತಿವರ್ಷ ಏರ್ಪಡಿಸಬೇಕಾದ ಅನಿವಾರ್ಯತೆಯನ್ನು ತಿಳಿಸಿದಾಗ್ಯೂ – ಹಲವು ಜಿಲ್ಲಾ ಸಂಸ್ಥೆಗಳು ಬೇರೆಬೇರೆ ಕಾರಣ – ಅನಿವಾರ್ಯತೆಗಳನ್ನು ಹೇಳಿಕೊಂಡು – ತರಬೇತಿಗಳನ್ನು ಏರ್ಪಡಿಸದಿರುವುದು ಸಮಂಜಸವಲ್ಲ.

ಬಹಳಷ್ಟು ಜಿಲ್ಲಾ ಸಂಸ್ಥೆಗಳು – ಡಿಡಿಪಿಐ ಆದೇಶವನ್ನು ಪಡೆದು ಮೂಲತರಬೇತಿ ಶಿಬಿರವನ್ನು ಏರ್ಪಡಿಸಿದಾಗ – ತರಬೇತಿಗೆ ಆಗಮಿಸಿದವರ ಸಂಖ್ಯೆಗೂ – ಇಲಾಖೆಯ ಅಧಿಕಾರಿಗಳು ಅನುಮತಿಸಿದ ಸಂಖ್ಯೆಗೂ ಸಾಕಷ್ಟು ವ್ಯತ್ಯಾಸವಿರುವುದನ್ನು ನಾವೆಲ್ಲ ಗಮನಿಸಿದ್ದೇವೆ. ಬಹಳ ಮಟ್ಟಿಗೆ ಸಂಖ್ಯಾಬಲ ಕಡಿಮೆಯಾಗಲು ಕಾರಣಗಳು ಹಲವಾರಿದ್ದು, ಅವುಗಳಲ್ಲಿ ಸ್ಥಳೀಯ ಹಾಗು ಜಿಲ್ಲಾ ಸಂಸ್ಥೆಗಳು ಮೂಲ ತರಬೇತಿ ಕಾರ್ಯಕ್ರಮ ಏರ್ಪಡಿಸುವ ಮೊದಲು, ಸ್ಥಳೀಯ ಅಥವಾ ಜಿಲ್ಲಾ ಮಟ್ಟದಲ್ಲಿ ಶಾಲೆ, ಕಾಲೇಜುಗಳ ಮುಖ್ಯಸ್ಥರುಗಳಿಗೆ ಒಂದು ದಿನದ ಸಾಮಾನ್ಯ ಮಾಹಿತಿ ಶಿಬಿರ **(Information Course)** ಮಾಡಬೇಕಾದ್ದು ಅವಶ್ಯಕ. ನನಗೆ ತಿಳಿದಿರುವಂತೆ ಎಲ್ಲಾ ನಗರ ಹಾಗು ತಾಲ್ಲೂಕು ಮತ್ತು ಇತರೆ ಸ್ಥಳಗಳಲ್ಲಿ ಸಾವಿರಾರು ಸರ್ಕಾರೇತರ ಶಾಲಾ–ಕಾಲೇಜುಗಳಿದ್ದು, ಅವರುಗಳನ್ನು ಸಂಪರ್ಕಿಸಿ– ಆ ಶಾಲೆಯ ಇಬ್ಬರು ಉಪಾಧ್ಯಾಯರನ್ನು ಸ್ಕೌಟ್–ಗೈಡ್ ತರಬೇತಿಗೆ ಪ್ರತ್ಯೇಕವಾಗಿ ಕಳುಹಿಸಿಕೊಡುವ ಬಗ್ಗೆ ಮುಂಚೆಯೇ ವಿಚಾರ–ವಿನಿಯಮ ಮಾಡಿದಲ್ಲಿ, ಸಾಕಷ್ಟು ಶಿಕ್ಷಕ–ಶಿಕ್ಷಕಿಯರುಗಳಿಗೆ ಕಬ್–ಬುಲ್‌ಬುಲ್–ಸ್ಕೌಟ್–ಗೈಡ್ ಮೂಲ ತರಬೇತಿ ನೀಡಲು ಸಾಧ್ಯವಾಗುವುದೆಂಬ ಚಿಂತನೆ ನನ್ನದು. ಈ ಬಗ್ಗೆಯೂ ಹಲವಾರು ಜಿಲ್ಲಾ ಸಂಸ್ಥೆಗಳು ಪ್ರಯತ್ನಪಟ್ಟಿರುವ ವಿಚಾರ ನನಗೆ ತಿಳಿದಿದ್ದು, ಇನ್ನೂ ಹೆಚ್ಚಿನ ರೀತಿಯಲ್ಲಿ ಈ ದಿಸೆಯಲ್ಲಿ ನಾವುಗಳು ಕಾರ್ಯನಿರತರಾಗುವುದು ಅವಶ್ಯವೆಂಬುದನ್ನು ನಿಮ್ಮಗಳ ಗಮನಕ್ಕೆ ತರಬಯಸುತ್ತೇನೆ.

ಇನ್ನೊಂದು ಮಾತು, ಸರ್ಕಾರ ಮತ್ತು ಸಾರ್ವಜನಿಕ ಶಿಕ್ಷಣ ಇಲಾಖೆಯ ಸಂಪೂರ್ಣ–ಸಹಾಯ–ಸಹಕಾರ–ಮಾರ್ಗದರ್ಶನ–ನೆರವಿನೊಂದಿಗೆ ಸಾಕಷ್ಟು ಕಾರ್ಯಕ್ರಮಗಳು–ಚಟುವಟಿಕೆಗಳು ಹಾಗು ತರಬೇತಿಗಳನ್ನು ನಡೆಸುತ್ತಿದ್ದು ಹಲವು ಜಿಲ್ಲಾ ಸಂಸ್ಥೆಗಳು ಶಾಲೆಗಳಲ್ಲಿ ಸೂಕ್ತ ಹಣಕಾಸಿನ ಸೌಲಭ್ಯಗಳಿಲ್ಲದ ಕಾರಣ ಮತ್ತು ಈ ಹಿಂದೆ ಸರ್ವಶಿಕ್ಷ ಅಭಿಯಾನ ವತಿಯಿಂದ ಮೂಲತರಬೇತಿ ಕಾರ್ಯಕ್ರಮಗಳಿಗೆ ನೀಡುತ್ತಿದ್ದ ಹಣಕಾಸಿನ ಸೌಲಭ್ಯವಿಲ್ಲದ ಕಾರಣ ಹಾಗು ಜಿಲ್ಲಾ ಸಂಸ್ಥೆಗಳು ಹಣಕಾಸಿನ ದೃಷ್ಟಿಯಿಂದ ಸಶಕ್ತವಾಗಿಲ್ಲದಿರುವುದರಿಂದ ತರಬೇತಿ ಕಾರ್ಯಕ್ರಮಗಳನ್ನು ನಡೆಸಲು / ಏರ್ಪಡಿಸಲು ಸಾಧ್ಯವಾಗಲಿಲ್ಲ ಎಂಬ ವಿಚಾರವನ್ನು ಹಲವಾರು ಸಭೆ–ಸಮಾರಂಭ–ಸಮಾವೇಶದಲ್ಲಿ ರಾಜ್ಯ ಸಂಸ್ಥೆಯ ಗಮನಕ್ಕೆ ತಂದಿರುತ್ತಾರೆ. ಈ ಬಗ್ಗೆ ಚಳವಳಿಯಲ್ಲಿ ಹಲವಾರು ವರ್ಷಗಳಿಂದ ಕರ್ತವ್ಯಗಳನ್ನು ನಿರ್ವಹಿಸುತ್ತಿರುವ ನಾವುಗಳೆಲ್ಲ ಚಿಂತಿಸಿ ಸೂಕ್ತ ಪರಿಹಾರ ಸೂಚಿಸಬೇಕಾದ ಅನಿವಾರ್ಯತೆ ನಮ್ಮಗಳ ಮೇಲಿದೆ.

ಬಹಳಮಟ್ಟಿಗೆ ರಾಜ್ಯ ಸಂಸ್ಥೆಯು ವಾರ್ಷಿಕ 2014–15ನೇ ಸಾಲಿನಲ್ಲಿ ರಾಜ್ಯದ ಎಲ್ಲಾ ಜಿಲ್ಲಾ ಸಂಸ್ಥೆಗಳೂ ಕಡ್ಡಾಯವಾಗಿ ಸೆಪ್ಟೆಂಬರ್–ಅಕ್ಟೋಬರ್ 2014ರೊಳಗಾಗಿ ಮೂಲ ತರಬೇತಿ ಶಿಬಿರವನ್ನು ಏರ್ಪಡಿಸಿ ಕನಿಷ್ಠ 100 ನೂತನ ಶಿಕ್ಷಕ–ಶಿಕ್ಷಕಿಯರುಗಳನ್ನು ಸ್ಕೌಟ್–ಗೈಡ್, ಕಬ್–ಬುಲ್‌ಬುಲ್ ತರಬೇತಿ ನೀಡಲೇಬೇಕಾದ ಅನಿವಾರ್ಯತೆಯನ್ನು ನೀವುಗಳೇ ಹಾಕಿಕೊಳ್ಳಬೇಕೆಂದು ಸೂಚಿಸಬಯಸುತ್ತೇನೆ.

ತರಬೇತಿಗಳ ಹಾಗು ಕಾರ್ಯಕ್ರಮಗಳ ಬಗ್ಗೆ ಹೆಚ್ಚಿನ ವಿವರ – ಮಾರ್ಗದರ್ಶನಕ್ಕೆ ರಾಜ್ಯ ಸಂಸ್ಥೆಯ ನನ್ನೆಲ್ಲಾ ಸಹೋದ್ಯೋಗಿಗಳು ಸದಾಸಿದ್ದರಿದ್ದೇವೆ ಎಂಬುದನ್ನು ನಿಮ್ಮಗಳ ಗಮನಕ್ಕೆ ತರಬಯಸುತ್ತೇನೆ.

ಹೋದವರ್ಷಕ್ಕಿಂತಲೂ, 2014–15ನೇ ಸಾಲಿನಲ್ಲಿ ಸ್ಕೌಟ್–ಗೈಡ್ ಚಳವಳಿಯ ಚಿಂತನೆಗಳನ್ನು ಹೆಚ್ಚುಗೊಳಿಸುವಲ್ಲಿ ದಯಾಮಯನಾದ ಭಗವಂತನು ನಮಗೆಲ್ಲಾ ಮಾರ್ಗದರ್ಶನ ನೀಡಿ ಆಶೀರ್ವದಿಸಲಿ ಎಂದು ಪ್ರಾರ್ಥಿಸುತ್ತೇನೆ.

ತಮ್ಮ ವಿಶ್ವಾಸಿ

ಕೊಂಡಜ್ಜಿ ಬ. ಷಣ್ಮುಖಪ್ಪ

ಕೊಂಡಜ್ಜಿ ಬ. ಷಣ್ಮುಖಪ್ಪ

## *RECENT CIRCULARS RECEIVED FROM NATIONAL HEADUARTERS REGARDING PROGRAMMES AND TRAININGS*

### EXCERPTS FROM THE CIRCULARS GIVEN BELOW :

1. Circular No.28/2014 Dated:11.04.2014
Sub:-**Course Fee Structure for Pre-ALT /ALT/LT**

Course Fees will be charged from the Participants as per the following rates.

a) For Pre-ALT Course (Regional Level) Rs.350/- + Rs.200/- = Total Rs.550/- Per head.

b) For ALT / LT Courses Rs.500/- + Rs.200/- = Total Rs.700/- per head will be with effect from 01.05.2014. No TA/ DA will be paid for these Trainings.

2. Circular No.24/ 2014 Dated:11.04.2014
Ref:1.NHQ Circular No.20/2014 Dated:03.04.2014.
2.NHQ Circular No.21/2014 Dated:04.04.2014

NHQ Circular No.20/2014 Dated:03.04.2014, please read point no 11 of guideline as "11. Cub / Bulbul Should have completed 07 (Seven) Years but not completed 10 (Ten) Years of age at the time of submission of his / her registration forms to **Regional Headquarters.**

NHQ Circular No.21/2014 Dated:04.04.2014 please read point No.21 as "21. Last date of receiving application at **Regional Headquarters** is 31st July 2014. Applications received after 31st July will be considered for the year 2015. No extension will be given.

3. Circular No.23/2014 Dated:11.04.2014
Sub:-**Availability of Golden Arrow Award / Rashtrapati Award Registration Form on the Website of the Bharat Scouts and Guides, National Headquarters.**

The Golden Arrow Award and the Rashtrapati Award Registration Forms are now available on the Website of the Bharat Scouts and Guides, National Headquarters, It can be downloaded and the same can be filled up and sent to the concerned Regional Headquarters as per our Circular No.17/2014 dated:27.03.2014 along with a Demand Draft for the cost of Application form @ Rs.4/- per form.

4. Circular No.31/2014 Dated:11.04.2014.
Sub:-**Signature of Unit Leader on Golden Arrow Award / Rashtrapati Award Registration Form.**

In case of transfer of Advanced Trained Unit Leaders from the main Units to some other Units, the Registration Form in case of Golden Arrow Award / Rashtrapati Award may be signed by the another Unit Leader even if he / she is basic trained.

In such case (transfer of Advanced Trained Unit Leaders) the Head of the Institution should issue a Certificate in favour of the Basic Trained Unit Leader working / in place of Advanced Trained Unit Leader. The Certificates should be enclosed along with the Golden Arrow Award / Rashtrapati Award Registration Forms.

5. Circular No.33/2014 Dated:11.04.2014
Sub:-**Inter State and Inter Country Visits.**

The National Commissioner has granted permission to all the States to visit or participate in any of the programmes hosted by any other States. There is no need of taking prior permission from National Headquarters. However information may be sent to the National Headquarters for such a participation.

In regard to visit to neighboring and other countries, it is very much necessary to take permission from the National Headquarters, so that we may issue the Introduction Letter to the Visiting group from National Headquarters. This will help the visiting groups to get all support and help from the NSO of the country being visited.

Sd/-
**(State Secretary)**

## ಗಮನಿಸಿರಿ

27ನೇ ಕರ್ನಾಟಕ ರಾಜ್ಯ ಸ್ಕೌಟ್ಸ್-ಗೈಡ್ಸ್ ಜಾಂಬೋರೇಟ್‌ನ್ನು 13ನೇ ಜುಲೈ 2014 ರಿಂದ 19ನೇ ಜುಲೈ 2014ರವರೆಗೆ ಡಾ॥ ಅನಿಬೆಸೆಂಟ್ ಸ್ಕೌಟ್ಸ್ –ಗೈಡ್ಸ್ ರಾಜ್ಯ ತರಬೇತಿ ಮತ್ತು ಶಿಬಿರ ಕೇಂದ್ರ, ದೊಡ್ಡಬಳ್ಳಾಪುರ, ಬೆಂಗಳೂರು ಗ್ರಾಮಾಂತರ ಜಿಲ್ಲೆಯಲ್ಲಿ ನಡೆಸಲು ತೀರ್ಮಾನಿಸಲಾಗಿದೆ.

ಜಾಂಬೋರೇಟ್ ಬಗ್ಗೆ ವಿವರವಾದ ಸುತ್ತೋಲೆಯನ್ನು ಜಿಲ್ಲಾ ಸಂಸ್ಥೆಗಳಿಗೆ ಸದ್ಯದಲ್ಲೇ ಕಳುಹಿಸಲಾಗುವುದು. ದಳಗಳ ನಾಯಕ-ನಾಯಕಿಯರುಗಳು /ರೋವರ್-ರೇಂಜರ್ ನಾಯಕ-ನಾಯಕಿಯರು ತಮ್ಮ ದಳಗಳನ್ನು ತಯಾರುಗೊಳಿಸಿ ಜಾಂಬೋರೇಟ್‌ನಲ್ಲಿ ಭಾಗವಹಿಸಲು ಸೂಚಿಸಿದೆ.

ಸಹಿ/-
(ರಾಜ್ಯ ಕಾರ್ಯದರ್ಶಿ)

# ಜಿಲ್ಲಾ ವಾರ್ತೆಗಳು................

## ಹಾಸನ

ದಿನಾಂಕ 20-02-2014 ರಿಂದ 22-02-2014 ರ ವರೆಗೆ ಹಾಸನ ಜಿಲ್ಲಾ ಸಂಸ್ಥೆಯ ವತಿಯಿಂದ ಜಿಲ್ಲಾ ಮಟ್ಟದ ರೋವರ್ಸ್ ಮತ್ತು ರೇಂಜರ್ಸ್ ಸಮಾಗಮ್ ಕಾರ್ಯಕ್ರಮವನ್ನು ಜಿಲ್ಲಾ ಸ್ಕೌಟ್ ಭವನದ ಆವರಣದಲ್ಲಿ ಹಮ್ಮಿಕೊಳ್ಳಲಾಗಿತ್ತು. ಈ ಶಿಬಿರದಲ್ಲಿ ವಿವಿಧ ಕಾಲೇಜುಗಳಿಂದ 94 ರೋವರ್ಸ್ ಮತ್ತು ರೇಂಜರ್ಸ್‌ಗಳು ಭಾಗವಸಿದ್ದರು. ಸಮಾಗಮದ ನಾಯಕರಾಗಿ ಶಿವಮೊಗ್ಗದ ರೋವರ್ ಸ್ಕೌಟ್ ಲೀಡರ್ ಆದ ಶ್ರೀ ಎ.ವಿ. ರಾಜೇಶ್ ವಹಿಸಿದ್ದರು. ಇವರಿಗೆ ಸಹಾಯಕರಾಗಿ ಶ್ರೀ ಉದಯ್ ಕುಮಾರ್ ಆರ್.ಎಸ್.ಎಲ್. ಮತ್ತು ಶ್ರೀ ಬೋರೇಗೌಡ ಆರ್.ಎಸ್.ಎಲ್. ಇವರುಗಳು ಕಾರ್ಯ ನಿರ್ವಹಿಸಿದರು.

ದಿನಾಂಕ 20-02-2014 ಮಧ್ಯಾಹ್ನ ಉದ್ಘಾಟನಾ ಸಮಾರಂಭ ಜರಿಗಿತು. ಪೂಜ್ಯ ಸ್ವಾಮಿ ಯುಕ್ತೇಶಾನಂದ ಮಹಾರಾಜ್, ರಾಮಕೃಷ್ಣ ಮಠ, ಪೊನ್ನಂಪೇಟೆ, ಕೊಡಗು ಜಿಲ್ಲೆ ಇವರು ಸಮಾಗಮವನ್ನು ಉದ್ಘಾಟಿಸಿದರು. ಡಾ|| ವೈ.ಎಸ್. ವೀರಭಧ್ರಪ್ಪ ಜಿಲ್ಲಾ ಮುಖ್ಯ ಆಯುಕ್ತರು ಅಧ್ಯಕ್ಷತೆ ವಹಿಸಿದ್ದರು. ಶ್ರೀ ಪ್ರಕಾಶ್ ಎಸ್. ಯಾಜಿ, ಜಿಲ್ಲಾ ಆಯುಕ್ತರು (ಸ್ಕೌಟ್ಸ್) ಹಾಸನ ಇವರು ಸರ್ವರನ್ನು ಸ್ವಾಗತಿಸಿದರು. ಶ್ರೀ ರಾಜೇಶ್ ಎ.ವಿ., ಸಮಾಗಮದ ನಾಯಕರು ಪ್ರಾಸ್ತಾವಿಕ ನುಡಿಗಳನ್ನಾಡಿದರು. ಸ್ವಾಮೀಜಿಯವರು ರೋವರ್ಸ್ ಮತ್ತು ರೇಂಜರ್ಸ್ ಧ್ಯೇಯೋದ್ದೇಶ ತುಂಬಾ ಒಳ್ಳೆಯದಿದ್ದು ಅದನ್ನು ಜೀವನದಲ್ಲಿ ಅಳವಡಿಸಿಕೊಂಡು ಹೋಗುವಂತೆ ತಿಳಿಸಿದರು. ಶ್ರೀಮತಿ ಜಯಾರಮೇಶ್, ಜಿಲ್ಲಾ ಆಯುಕ್ತರು(ಗೈಡ್ಸ್) ಉಪಸ್ಥಿತರಿದ್ದು ಶಿಬಿರಾರ್ಥಿಗಳಿಗೆ ಶುಭ ಹಾರೈಸಿದರು. ಶ್ರೀ ಮುತ್ತೇಗೌಡ ಜಿಲ್ಲಾ ಕಾರ್ಯದರ್ಶಿಗಳು ಸರ್ವರಿಗೂ ವಂದನೆ ಸಲ್ಲಿಸಿದರು. ಶ್ರೀ ಬೋರೇಗೌಡ ಆರ್.ಎಲ್.ಎಸ್. ಕಾರ್ಯಕ್ರಮ ನಿರೂಪಿಸಿದರು.

ನಂತರ ಶ್ರೀ ಸ್ವಾಮಿ ಯುಕ್ತೇಶಾನಂದಜಿ ಮಹಾರಾಜ್ ರವರು ವ್ಯಕ್ತಿತ್ವ ವಿಕಸನ ಮಾಲಿಕೆಯಲ್ಲಿ ಸಂವಾದ ಕಾರ್ಯಕ್ರಮವನ್ನು ನಡೆಸಿಕೊಟ್ಟರು.

ಮಧ್ಯಾನ್ಹ "ಸಾರ್ವಜನಿಕ ಜಾಲತಾಣಗಳು ಯುವ ಜನತೆಯನ್ನು ದಿಕ್ಕು ತಪ್ಪಿಸುತ್ತಿದೆಯೇ?" ಎಂಬ ವಿಷಯದ ಬಗ್ಗೆ ಚರ್ಚೆ ನಡೆಸಲಾಯಿತು

ದಿನಾಂಕ 21-02-2014 ರಂದು ಸ್ಕೌಟ್ ಕೌಶಲಗಳು ಹಾಗೂ ಚರ್ಚಾಸ್ಪರ್ಧೆ ಏರ್ಪಡಿಸಲಾಗಿತ್ತು. ಚರ್ಚಾಸ್ಪರ್ಧೆಯಲ್ಲಿ ಈ ಕೆಳಕಂಡ ಮಹನೀಯರು ಉಪಸ್ಥಿತರಿದ್ದು ಕಾರ್ಯಕ್ರಮವನ್ನು ನಡೆಸಿಕೊಟ್ಟರು.

1) ಶ್ರೀ ಹೆಚ್.ಎಂ. ಶಿವಣ್ಣ, ಸ್ವಾತಂತ್ರ್ಯ ಹೋರಾಟಗಾರರು. 2) ಶ್ರೀ ಹೆಚ್.ಎನ್. ರವಿಕುಮಾರ್, ಅಧ್ಯಕ್ಷರು, ವಿಶ್ವಮಾನವ ಒಕ್ಕೂಟ. 3) ಶ್ರೀಮತಿ ಕೆ.ಟಿ. ಜಯಶ್ರೀ, ಅಧ್ಯಕ್ಷರು, ಅನನ್ಯ ಟ್ರಸ್ಟ್, ಹಾಸನ. 4) ಶ್ರೀಮತಿ ಜಯ ರಮೇಶ್, ಜಿಲ್ಲಾ ಆಯುಕ್ತರು (ಗೈಡ್ಸ್) ಹಾಸನ.

ರಾತ್ರಿ ಭವ್ಯ ಶಿಬಿರಾಗ್ನಿ ಕಾರ್ಯಕ್ರಮವನ್ನು ಡಾ|| ವೈಎಸ್. ವೀರಭದ್ರಪ್ಪ ಜಿಲ್ಲಾ ಮುಖ್ಯ ಆಯುಕ್ತರು ಉದ್ಘಾಟಿಸಿದರು.

ದಿನಾಂಕ 22-02-2014 ರಂದು ಬೆಳಿಗ್ಗೆ ಸರ್ವಧರ್ಮ ಪ್ರಾರ್ಥನೆ ನಡೆಯಿತು. ಪ್ರೊ॥ ವೆಂಕಟರಮಣ ಭಟ್ ಇವರು ಸರ್ವಧರ್ಮ ಸಮನ್ವತೆ ಮತ್ತು ಸ್ಕೌಟಿಂಗ್ ಎನ್ನುವ ವಿಷಯದ ಬಗ್ಗೆ ಚಿಂತನೆ ಕಾರ್ಯಕ್ರಮ ನಡೆಸಿಕೊಟ್ಟರು. ಧ್ವಜಾರೋಹಣದ ನಂತರ ಸಂಸ್ಥಾಪಕರ ದಿನಾಚರಣೆ ಮತ್ತು ಚಿಂತನ ದಿನಾಚರಣೆಯ ಅಂಗವಾಗಿ ಹಾಸನ ಜಿಲ್ಲಾ ಸಂಸ್ಥೆಯ ವತಿಯಿಂದ ಏರ್ಪಡಿಸಿದ್ದ ಪಥಚಲನದಲ್ಲಿ ಶಿಬಿರಾರ್ಥಿಗಳು ಭಾಗವಹಿಸಿದರು.

ಸಮಾಗಮ್‌ನ ಮುಕ್ತಾಯ ಕಾರ್ಯಕ್ರಮಕ್ಕೆ ಮುಖ್ಯ ಅತಿಥಿಗಳಾಗಿ ಹಾಸನ ನಗರದ ಲೋಕಾಯುಕ್ತ ಎಸ್.ಪಿ. ಯವರಾದ ಶ್ರೀ ಡಿ.ಎ. ವೇದಮೂರ್ತಿಗಳು ಮತ್ತು ನಗರಸಭೆ ಅಧ್ಯಕ್ಷರಾದ ಶ್ರೀಮತಿ ವಿದ್ಯಾ ಇವರುಗಳು ಆಗಮಿಸಿದ್ದರು. ಶ್ರೀ ಡಿ.ಎ. ವೇದಮೂರ್ತಿಗಳು ಸಮಾಗಮ್ ಬಗ್ಗೆ ಮಾತನಾಡಿದರು. ಶಿಭಿರದ ನಾಯಕರಾದ ಶ್ರೀ ರಾಜೇಶ್ ಎ.ವಿ. ರವರು ಸಮಾಗಮದ ಸಂಪೂರ್ಣ ವಿವರಗಳನ್ನು ತಿಳಿಸಿದರು. ಡಾ॥ ವೈ.ಎಸ್. ವೀರಭದ್ರಪ್ಪ ಜಿಲ್ಲಾ ಮುಖ್ಯ ಆಯುಕ್ತರು ಅಧ್ಯಕ್ಷತೆ ವಹಿಸಿದ್ದರು. ಶ್ರೀ ಪ್ರಕಾಶ್ ಎಸ್. ಯಾಜಿ, ಜಿಲ್ಲಾ ಆಯುಕ್ತರು (ಸ್ಕೌಟ್ಸ್) ಶ್ರೀಮತಿ ಜಯರಮೇಶ್, ಜಿಲ್ಲಾ ಆಯಕ್ತರು (ಗೈಡ್ಸ್) ಹಾಗು ಜಿಲ್ಲಾ ಪದಾಧಿಕಾರಿಗಳು ಭಾಗವಹಿಸಿದ್ದರು.

***********

ದಿನಾಂಕ 22-02-2014 ರಂದು ಶ್ರೀ ವೆಂಕಟೇಶ್ವರ ಎಜುಕೇಷನ್ ಟ್ರಸ್ಟ್, ಹೊಳೇನರಸೀಪುರ, ಹಾಸನ ತಾಲ್ಲೂಕು ಇಲ್ಲಿ ಗೈಡ್ ಕಂಪನಿಯ ವತಿಯಿಂದ ಸ್ಕೌಟ್ ಮತ್ತು ಗೈಡ್ ಸಂಸ್ಥಾಪಕರ ದಿನಾಚರಣೆ ಕಾರ್ಯಕ್ರಮವನ್ನು ಹಮ್ಮಿಕೊಳ್ಳಲಾಯಿತು. ಈ ಸಂದರ್ಭದಲ್ಲಿ ಮುಖ್ಯ ಅತಿಥಿಗಳಾಗಿ ಭಾಗವಹಿಸಿದ್ದ ಡಾ॥ ಶ್ರೀನಿವಾಸ್ ಮೂರ್ತಿಯವರು ಮಕ್ಕಳಿಗೆ ಪ್ರಥಮ ಚಿಕಿತ್ಸೆ ಹಾಗೂ ಸಮಯೋಚಿತವಾದ ಪ್ರಜ್ಞೆಯ ಬಗ್ಗೆ ಅರಿವು ಮೂಡಿಸಿದರು. ಮತ್ತೋರ್ವ ಅತಿಥಿಗಳಾದ ಶ್ರೀಯುತ ಅರುಣ್ ಕುಮಾರ್ ರವರು ಸ್ಕೌಟ್ಸ್-ಗೈಡ್ಸ್‌ಗಳಿಗೆ ಚಿಕವಯಸ್ಸಿನಲ್ಲೇ ಶಿಸ್ತು, ಸೇವಾ ಮನೋಭಾವನೆ ಮತ್ತು ನಾಯಕತ್ವ ಗುಣಗಳನ್ನು ಬೆಳೆಸಿಕೊಳ್ಳುವ ಮೂಲಕ ಸತ್‌ಪ್ರಜೆಗಳಾಗಿ ಹೊರಹೊಮ್ಮಬೇಕಾಗಿದೆ ಎಂದು ಕರೆಕೊಟ್ಟರು. ಈ ಸಮಾರಂಭದಲ್ಲಿ ಸ್ಥಳೀಯ ಕಾರ್ಯದರ್ಶಿಗಳಾದ ಶ್ರೀಯುತ ನಾರಾಯಣ ಶೆಟ್ಟಿಯರವರು ಹಾಗೂ ಶಾಲೆಯ ಮುಖ್ಯೋಪಾಧ್ಯಾಯರಾದ ಶ್ರೀಯುತ ಚಂದ್ರಶೇಖರವರು ಉಪಸ್ಥಿತರಿದ್ದರು. ಇದೇ ಸಂದರ್ಭದಲ್ಲಿ ಸ್ಕೌಟ್-ಗೈಡ್‌ಗಳಿಗೆ ಹಲವಾರು ಸ್ಪರ್ಧೆಗಳನ್ನು ಏರ್ಪಡಿಸಿ ಬಹುಮಾನಗಳನ್ನು ವಿತರಿಸಲಾಯಿತು. ಶ್ರೀಮತಿ ಕುಮುದ, ಆರ್. ಗೈಡ್ ಕ್ಯಾಪ್ಟನ್ ಎರಲ್ಲನ್ನು ಸ್ವಾಗತಿಸಿದರು. ಶ್ರೀಮತಿ ಶೋಭಾ ಇವರು ವಂದನಾರ್ಪಣೆಯನ್ನು ಸಲ್ಲಿಸಿದರು.

*************

ದಿನಾಂಕ 12 ರಿಂದ 14-02-2014 ರ ವರೆಗೆ ಸಾರ್ವಜನಿಕ ಶಿಕ್ಷಣ ಇಲಾಖೆ, ಅರಸೀಕೆರೆ ವತಿಯಿಂದ ಸುಕ್ಷೇತ್ರ ಯಾದಾಪುರದಲ್ಲಿ, 10ನೇ ತರಗತಿಯ ವಿದ್ಯಾರ್ಥಿ/ವಿದ್ಯಾರ್ಥಿನಿಯರಿಗೆ "ಪರೀಕ್ಷೆಗಾಗಿ ಪೂರ್ವಸಿದ್ಧತೆ" ಕಾರ್ಯಕ್ರಮವನ್ನು ಏರ್ಪಡಿಸಲಾಗಿತ್ತು. ಪ್ರತಿ ಶಾಲೆಗೆ 3 ಮಕ್ಕಳಂತೆ ತಾಲ್ಲೂಕಿನ ವಿವಿಧ ಶಾಲೆಗಳಿಂದ ಒಟ್ಟು 280 ಮಕ್ಕಳು ಭಾಗವಹಿಸಿದ್ದರು. ಈ ತರಬೇತಿ ಕಾರ್ಯಕ್ರಮದಲ್ಲಿ ನಾಲ್ಕು ಸ್ಕೌಟ್ ಮಾಸ್ಟರ್ಸ್, ಇಬ್ಬರು ಗೈಡ್ ಕ್ಯಾಪ್ಟನ್ಸ್ ಸ್ವಯಂ ಸೇವಕರಾಗಿ ಭಾಗವಹಿಸಿ, ಮಕ್ಕಳ ಊಟ, ವಸತಿ ಮತ್ತು ಯೋಗಕ್ಷೇಮದ ಜವಾಬ್ದಾರಿಯನ್ನು ಉತ್ತಮವಾಗಿ ನಿರ್ವಹಿಸಿ, ತರಬೇತಿ ಕಾರ್ಯಕ್ರಮದ ಯಶಸ್ಸಿಗೆ ಸಹಕರಿಸಿದರು.

***************

ದಿನಾಂಕ 07-04-2014 ರಂದು ಬಾಗೇಶಪುರದ ಸ.ಹಿ.ಪ್ರಾ. ಶಾಲೆಯ 'ನೇತಾಜಿ ಸ್ಕೌಟ್ ಟ್ರೂಪ್' ವತಿಯಿಂದ 6 ಕಿ.ಮೀ. ಗಳ ಸಮೀಪವಿರುವ ಕುಂತಿಯಮ್ಮನ ಗುಡ್ಡಕ್ಕೆ ಸೈಕಲ್ ಹೊರ ಸಂಚಾರ ಕಾರ್ಯಕ್ರಮನ್ನು ಏರ್ಪಡಿಸಲಾಗಿತ್ತು. ಗುಡ್ಡದ ಮೇಲಿನ ಪರಿಸರದಲ್ಲಿ ಕಂಪಾಸ್ ಬಳಸಿ 12 ದಿಕ್ಕುಗಳನ್ನು ಕಂಡುಹಿಡಿಯುವ ಬಗ್ಗೆ ಹಾಗೂ ದೂರದರ್ಶಕ ಬಳಸಿ ದೂರದ ದೃಶ್ಯಗಳನ್ನು ವೀಕ್ಷಿಸುವ ವಿಧಾನವನ್ನು ಸ್ಕೌಟ್ಸ್‌ಗಳಿಗೆ ಅರ್ಥೈಸಲಾಯಿತು. ಮಧ್ಯಾಹ್ನದ ಅವಧಿಯಲ್ಲಿ ಬೆಂಕಿಯಿಲ್ಲದೆ ಅಡುಗೆ ಮಾಡುವ ಕಾರ್ಯಕ್ರಮ ಏರ್ಪಡಿಸಲಾಗಿತ್ತು. ಸಂಜೆಯ ಅವಧಿಯಲ್ಲಿ ಸ್ಕೌಟ್ಸ್‌ಗಳಿಂದ ಸಾಂಸ್ಕೃತಿಕ ಕಾರ್ಯಕ್ರಮಗಳನ್ನು ವ್ಯವಸ್ಥೆಗೊಳಿಸಲಾಗಿತ್ತು.

ಈ ಎಲ್ಲಾ ಕಾರ್ಯಕ್ರಮಗಳನ್ನು ಸ್ಕೌಟ್ ಮಾಸ್ಟರ್ ಶ್ರೀ ಜೆ.ಎಲ್. ಲೀಲಾ ಮಹೇಶ್ವರ್ ಸಂಘಟಿಸಿದರು .ಒಟ್ಟು 32 ಸ್ಕೌಟ್ಸ್‌ಗಳು ಭಾಗವಹಿಸಿದ್ದರು.

## ಬೀದರ್

ದಿನಾಂಕ 05-03-2014 ರಂದು ಬೀದರ್ ಜಿಲ್ಲೆಯ ಪ್ರತಿಷ್ಠಿತ ಶಿಕ್ಷಣ ಸಂಸ್ಥೆ ಬಿ.ವ್ಹಿ. ಭೂಮರಡ್ಡಿ ಪದವಿ ಮಹಾವಿದ್ಯಾಲಯದಲ್ಲಿ ಕಾಲೇಜಿನ ಭಗತಸಿಂಗ್ ರೋವರ್ಸ್ ಹಾಗೂ ಕಲ್ಪನಾ ಚಾವ್ಲಾ ರೇಂಜರ್ಸ್‌ಗಳಿಗೆ 'ದೀಕ್ಷಾ ಸಮಾರಂಭ' ಜರುಗಿತು. ಕಾರ್ಯಕ್ರಮದಲ್ಲಿ ಕಾಲೇಜಿನ ರೋವರ್ಸ್-ರೇಂಜರ್ಸ್, ಎನ್.ಸಿ.ಸಿ. ಹಾಗೂ ಎನ್.ಎಸ್.ಎಸ್. ಅಧಿಕಾರವರ್ಗ, ಕಾಲೇಜಿನ ಸಿಬ್ಬಂಧಿವರ್ಗ, ರೋವರ್ ಲೀಡರ್ ಶ್ರೀ ಶ್ರೀಕಾಂತ ಬಿರಾದಾರ ರೇಂಜರ್ ಲೀಡರ್ ಪ್ರೊ. ಸವಿತಾ ಸಿ.ಕೆ., ಪ್ರಾಚಾರ್ಯ ಪ್ರೊ. ಸೈಯದ್ ಅಪ್ರೋಜ ಪಾಶಾ ಹಾಗೂ ಜಿಲ್ಲಾ ಸಂಸ್ಥೆಯ ಪದಾಧಿಕಾರಿಗಳು ಭಾಗಿಯಾಗಿದ್ದರು.

ಇದೇ ಸಂದರ್ಭದಲ್ಲಿ ಕಾಲೇಜು ಆಡಳಿತ ಮಂಡಳಿಯ ಅಧ್ಯಕ್ಷ ಶ್ರೀ ಬಸವರಾಜ ಎನ್. ಜಾಬಾಶೆಟ್ಟಿ, ಸಿಬ್ಬಂದಿ ವರ್ಗ ಮತ್ತು ಜಿಲ್ಲಾ ಸಂಸ್ಥೆ ಮುಖ್ಯ ಆಯುಕ್ತರಾದ ಡಾ. ಎಸ್.ಎಸ್. ಸಿದ್ದಾರೆಡ್ಡಿ, ಡಿ.ಸಿ.(ಜಿ) ಶ್ರೀಮತಿ ಲೀಲಾವತಿ ಚಿಕೋತೆ, ಜಿಲ್ಲಾ ಕಾರ್ಯದರ್ಶಿ, ಶ್ರೀ ಶೇಖ್ ಮಸ್ತಾಕ್ ಆಲಿ ಹಾಗೂ ಡಿ.ಓ.ಸಿ, ಉಪಸ್ಥಿತರಿದ್ದು, ರೋವರ್ಸ್-ರೇಂಜರ್ಸ್‌ಗಳಿಗೆ ಪ್ರೇರಣೆ ನೀಡಿದರು.

ನಂತರ ಸೆಮಿನಾರ್ ಹಾಲ್‌ನಲ್ಲಿ ನಡೆದ ಸಮಾರಂಭದಲ್ಲಿ ಡಾ. ಸಿದ್ಧಾರಡ್ಡಿ ಮಾತನಾಡಿ ಶಿಸ್ತು, ಸಮಯಪಾಲನೆ, ಸಾಹಸಪ್ರವೃತ್ತಿ, ರಾಷ್ಟ್ರಭಕ್ತಿಗಳಂಥ ಮೌಲ್ಯಗಳನ್ನು ಕಳೆದ 100 ವರ್ಷಗಳಿಂದ ಯುವ ಜನಾಂಗಕ್ಕೆ ಬಿತ್ತುವ ಮಹತ್ತರಕಾರ್ಯ ಸಂಸ್ಥೆ ಮಾಡುತ್ತಿದೆ. ಪ್ರತಿಯೊಬ್ಬರಲ್ಲು ಸುಪ್ತ ಚೇತನವಿದ್ದು ಅದನ್ನು ಹೊರಹಾಕಿ ತನ್ಮೂಲಕ ಸಮಾಜಸೇವೆ - ರಾಷ್ಟ್ರಸೇವೆ ಮಾಡಲು ಪ್ರೇರಣ ನೀಡಬೇಕು ಎಂದರು. ನಂತರ ಮಾತನಾಡಿದ ಜಿಲ್ಲಾ ಕಾರ್ಯದರ್ಶಿ ಶ್ರೀ ಶೇಖ್ ಮುಸ್ತಾಕ್ ಆಲಿ, ಯುವ ಜನಾಂಗ ಇಂದು ವ್ಯಸನಗಳಿಂದ, ದುಶ್ಚಟಗಳಿಂದ ದಾರಿತಪ್ಪುತಿದ್ದು ಅವರನ್ನು ಸರಿದಾರಿಗೆ ತರುವುದು ಇಂಥ ಸಂಸ್ಥೆಯ ಹೊಣೆಯಾಗಿದ್ದು, ಆ ನಿಟ್ಟಿನಲ್ಲಿ ಕಾರ್ಯಪ್ರವರ್ತತೆ ನಡೆದಿದೆ ಎಂದರು.

*************

ದಿನಾಂಕ 25-02-2014 ರಂದು ಬಸವ ಕಲ್ಯಾಣ ತಾಲ್ಲೂಕಾ ರ‍್ಯಾಲಿಯು ಜರುಗಿತು. ಭಾರತ್ ಸ್ಕೌಟ್ಸ್ – ಗೈಡ್ಸ್ ಸ್ಥಳೀಯ ಸಂಸ್ಥೆ ಹಾಗೂ ಶಾಂತಿನಿಕೇತನ ಶಿಕ್ಷಣ ಸಂಸ್ಥೆ ಇವರುಗಳ ಸಂಯುಕ್ತಾಶ್ರಯದಲ್ಲಿ ತಾಲೂಕಿನ 250 ಸ್ಕೌಟ್ಸ್/ಗೈಡ್ಸ್‌ಗಳು ಸ್ಕೌಟರ್/ಗೈಡರ್ ಹಾಗೂ ಪಾಲಕರು ಕಾರ್ಯಕ್ರಮದಲ್ಲಿ ಭಾಗವಹಿಸಿದ್ದರು.

ಅಂದು ಮುಂಜಾನೆ ಧ್ವಜಾರೋಹಣ ನೆರವೇರಿತು. ಶ್ರೀ ಸಂಜೀವಕುಮಾರ ಕಾಂಗೆ, ಕ್ಷೇತ್ರ ಸಂಪನ್ಮೂಲ ಅಧಿಕಾರಿಗಳು, ಬಸವ ಕಲ್ಯಾಣ ಉಪಸ್ಥಿತರಿದ್ದರು. ನಂತರ ಸ್ಕೌಟ್ಸ್-ಗೈಡ್ಸ್‌ಗಳ ಪಥಚಲನೆಯನ್ನು ಶ್ರೀ ಮಲ್ಲಿಕಾರ್ಜುನ ಯಾತನೂರ ಪಿ.ಎಸ್.ಐ., ರವರು ಹಸಿರು ನಿಶಾನೆ ತೋರಿಸಿ ಉದ್ಘಾಟಿಸಿದರು.

ನಂತರ ನಡೆದ ಕಾರ್ಯಕ್ರಮದಲ್ಲಿ ಡಾ. ರವೀಂದ್ರ, ತಾಲೂಕಾ ಪಶು ವೈದ್ಯಾಧಿಕಾರಿಗಳು ಅಧ್ಯಕ್ಷತೆ ವಹಿಸಿದ್ದರು. ಮುಖ್ಯ ಅತಿಥಿಯಾಗಿ ಡಾ. ಎಫ್.ಎಸ್. ಸಿದ್ಧಾರಡ್ಡಿ, ಅತಿಥಿಗಳಾಗಿ ಶ್ರೀ ಗಂಗಣ್ಣ ಸ್ವಾಮಿ ಕ್ಷೇತ್ರ ಶಿಕ್ಷಣಾಧಿಕಾರಿಗಳು, ಶ್ರೀ ದೇಶಪ್ಪ, ಜಿಲ್ಲಾ ದೈಹಿಕ ಶಿಕ್ಷಣ ಅಧಿಕಾರಿ, ಶ್ರೀ ಬಾಬುರಾವ ನಿಂಬೂರೆ ಎ.ಎಲ್.ಟಿ. (ಎಸ್.) ಶ್ರೀ ಮಾಣಿಕರಾವ ಗೊರಮುಡೆ, ಹೆಚ್.ಎಂ. ಶ್ರೀ ಶಿವರಾಜಯ್ಯ ಸ್ವಾಮಿ ಹೆಚ್.ಎಂ. ರವರು ಭಾಗವಹಿಸಿದ್ದರು.

10ನೇ ತರಗತಿಯಲ್ಲಿ ಅತಿಹೆಚ್ಚು ಅಂಕ ಪಡೆದ ಹಾಗೂ ಶಾಲೆಗೆ ವಿವಿಧ ಕ್ಷೇತ್ರಗಳಲ್ಲಿ ಗಣನೀಯ ಸಾಧನೆ ಮಾಡಿ ಕೀರ್ತಿ ತಂದ ಸ್ಕೌಟ್-ಗೈಡ್‌ಗಳನ್ನು ಸನ್ಮಾನಿಸಲಾಯಿತು. ಶ್ರೀ ಅನಂತ ವಿ. ಬಂಡಿ ಸ್ಥಳೀಯ ಸಂಸ್ಥೆ ಕಾರ್ಯದರ್ಶಿಗಳನ್ನು ಈ ಸಂದರ್ಭದಲ್ಲಿ ಸನ್ಮಾನಿಸಲಾಯಿತು.

*************

ರಾಷ್ಟ್ರಕಟ್ಟುವ ಕಾರ್ಯ ಶಾಲಾ ಕೊಠಡಿಯಿಂದಲೇ ಆರಂಭವಾಗಬೇಕಿದೆ. ಇಂದಿನ ಮಕ್ಕಳೇ ಮುಂದಿನ ರಾಷ್ಟ್ರದ ರೂವಾರಿಗಳು ಎಂದು ಆಣದೂರ ಪಂಚಾಯತ್ ಅಭಿವೃದ್ಧಿ ಅಧಿಕಾರಿ ಶ್ರೀಶಿವಲೀಲಾ ರವರು ಹೇಳಿದರು. ಬೀದರ್ ತಾಲೂಕಿನ ಆಣದೂರ ನೈಟಿಂಗೇಲ್ ಪಬ್ಲಿಕ್ ಶಾಲೆಯಲ್ಲಿ ಬುಧವಾರ ಆಯೋಜಿಸಿದ 'ಸ್ಕೌಟ್‌ಗಳಿಗೆ ದೀಕ್ಷಾ ಸಮಾರಂಭ ಕಾರ್ಯಕ್ರಮ ಉದ್ಘಾಟಿಸಿ ಮಾತನಾಡಿದರು.

ಸ್ಕೌಟ್-ಗೈಡ್‌ನಿಂದ ಮಕ್ಕಳಲ್ಲಿ ಕೌಶಲ್ಯ ಬೆಳವಣಿಗೆಯಾಗುತ್ತದೆ ಎಂದು ಜಿಲ್ಲಾ ಕಾರ್ಯದರ್ಶಿ ಶ್ರೀ ಶೇಖ್ ಮುಸ್ತಾಕ್ ಅಲಿ ನುಡಿದರು. ಜಿಲ್ಲಾ ಸಂಘಟನಾ ಆಯುಕ್ತ ಶ್ರೀ ಶಿವಕುಮಾರ ಹಾಲಹಳ್ಳಿ ಸ್ಕೌಟಿಂಗ್ ವಿಫುಲ ಅವಕಾಶಗಳನ್ನು ವಿದ್ಯಾರ್ಥಿಗಳಿಗೆ ನೀಡಿದೆ ಎಂದರು.

ಕಾರ್ಯಕ್ರಮದಲ್ಲಿ ಜಿಲ್ಲಾ ಗೈಡ್ ಆಯುಕ್ತೆ ಶ್ರೀಮತಿ ಲೀಲಾವತಿ ಚಕೋತೆ, ಜಿಲ್ಲಾ ತರಬೇತಿ ಆಯುಕ್ತ ಶ್ರೀಬಾಬುರಾವ ನಿಂಬುರೆ ಸಮಾರಂಭ ಉದ್ದೇಶಿಸಿ ಮಾತನಾಡಿದರು. ಸಂಸ್ಥೆಯ ಆಡಳಿತ ಮಂಡಳಿ ಅಧ್ಯಕ್ಷ ಶ್ರೀ ಬಸವರಾಜ ಭರಶೆಟ್ಟಿ ಎಲ್ಲರನ್ನು ಅಭಿನಂದಿಸಿದರು. ಶಾಲೆಯ ಮುಖ್ಯ ಗುರು ಅಂಬಿಕಾ ಜವಳಿ ಹಾಗೂ ಸಿಬ್ಬಂದಿ ಕಾರ್ಯಕ್ರಮ ಸಂಘಟಿಸಿದರು.

***********

ಸ್ಕೌಟ್ಸ್-ಗೈಡ್ಸ್ ಚಟುವಟಿಕೆಗಳಲ್ಲಿ ತೊಡಗುವುದರಿಂದ ಶಿಸ್ತಿನ ಬದುಕು ಸಮಯಪಾಲನೆ, ಸ್ವಯಂ ಶಿಸ್ತು, ರಾಷ್ಟ್ರಪ್ರೇಮಗಳಂತಹ ಮೌಲ್ಯಗಳು ವಿದ್ಯಾರ್ಥಿಗಳಲ್ಲಿ ಮೈಗೂಡಿ ಪರೋಕ್ಷವಾಗಿ ವ್ಯಕ್ತಿತ್ವ ವಿಕಸನವಾಗುತ್ತದೆ

ಎಂದು ಭಾರತ್ ಸ್ಕೌಟ್ಸ್-ಗೈಡ್ಸ್‌ನ ಜಿಲ್ಲಾ ಸಂಘಟನಾ ಆಯುಕ್ತ ಶ್ರೀ ಶಿವಕುಮಾರ್ ಹಾಲಹಳ್ಳಿ, ಹೇಳಿದರು. ಹುಮನಾಬಾದ ಪಟ್ಟಣದ ಸರಕಾರಿ ಪ್ರಥಮದರ್ಜೆ ಕಾಲೇಜಿನಲ್ಲಿ ಬುಧವಾರ ಸ್ಕೌಟ್ಸ್-ಗೈಡ್ಸ್ ಕುರಿತು ಹಮ್ಮಿಕೊಂಡ ವಿಶೇಷ ಉಪನ್ಯಾಸ ಕಾರ್ಯಕ್ರಮದಲ್ಲಿ ಅವರು ಮಾತನಾಡಿದರು.

ಕಾಲೇಜಿನ ರೋವರ್ ಲೀಡರ್ ಪ್ರೊ. ರವಿ ನಾಯಕ್ ಪ್ರಾಸ್ತಾವಿಕ ನುಡಿ ನುಡಿದರು. ಕಾಲೇಜಿನ ಪ್ರಾಚಾರ್ಯ ಪ್ರೊ. ಅಂಬ್ರೇಪ್ಪಾ ವಿದ್ಯಾರ್ಥಿಗಳಿಗೆ ಸ್ಕೌಟ್ಸ್-ಗೈಡ್ಸ್ ತಂಡಕ್ಕೆ ಸೇರಲು ಕರೆ ನೀಡಿದರು. ಡಾ. ವಿಜಯಕುಮಾರ್ ಸಿಂದೆ, ಶ್ರೀಮತಿ ವಿದ್ಯಾವತಿ ಪಾಟೀಲ್, ಡಾ. ಮಹಾದೇವಿ ಹೆಬ್ಬಾಳ್‌ಕರ್ ಹಾಗೂ ಕಾಲೇಜಿನ 400 ವಿದ್ಯಾರ್ಥಿಗಳು ಕಾರ್ಯಕ್ರಮದಲ್ಲಿ ಭಾಗವಹಿಸಿದ್ದರು.

***********

ಬೀದರ ಜಿಲ್ಲೆಯ ಔರಾದ ತಾಲೂಕಿನ ಸ್ಥಳೀಯ ಸಂಸ್ಥೆಯ ಸ್ಕೌಟರ್ಸ್-ಗೈಡರ್ಸ್‌ಗಳಿಗೆ ಹಮ್ಮಿಕೊಂಡಿದ್ದ ಒಂದು ದಿನದ ಕಾರ್ಯಾಗಾರದಲ್ಲಿ ಶಿಬಿರಾರ್ಥಿಗಳಿಗೆ ರಾಜ್ಯ ಪುರಸ್ಕಾರ ಅರ್ಜಿ ತುಂಬುವ ವಿಧಾನ, ಪ್ರಾವೀಣ್ಯತಾ ಪದಕಗಳು, ಬ್ಯಾಡ್ಜ್‌ಕಮಿಟಿ, ರಾಷ್ಟ್ರಪತಿ ಪೂರ್ವಭಾವಿ ಪರೀಕ್ಷಾ ಶಿಬಿರಗಳ ಬಗ್ಗೆ ಮಾಹಿತಿ ನೀಡಲಾಯಿತು. ಅಲ್ಲದೆ ಶಿಬಿರಾರ್ಥಿಗಳಿಗೆ ಬೇಸ್‌ಗಳ ಮೂಲಕ ಗಂಟುಗಳು, ಪ್ರಥಮ ಚಿಕಿತ್ಸೆ, ಕಟ್ಟುಗಳು ಮುಂತಾದ ಬಗ್ಗೆ ತಿಳಿಸಲಾಯಿತು.

## ಬಳ್ಳಾರಿ

ದಿನಾಂಕ 24-02-2014 ರಂದು "ಲಾರ್ಡ್ ಬೇಡನ್ ಪಾವೆಲ್ ರವರ ಜನ್ಮ ದಿನಾಚಣೆ"ಯ ಅಂಗವಾಗಿ ಸಿರುಗುಪ್ಪ ತಾಲೂಕಾ ಮಟ್ಟದ ಸ್ಕೌಟ್ಸ್ ಮತ್ತು ಗೈಡ್ಸ್ ಮಕ್ಕಳ ಮೇಳ ಮತ್ತು ಶಿಕ್ಷಕ/ಶಿಕ್ಷಕಿಯರ ಸಮಾವೇಶವು ಎಸ್.ಇ.ಎಸ್. ಬಾಲಕಿಯರ ಪ್ರೌಢಶಾಲೆ, ಸಿರುಗುಪ್ಪದಲ್ಲಿ ಏರ್ಪಡಿಸಲಾಗಿತ್ತು. ಶ್ರೀ ಕೆ.ವಿ. ಶ್ರೀನಿವಾಸಮೂರ್ತಿ ಕ್ಷೇತ್ರ ಶಿಕ್ಷಣಾಧಿಕಾರಿ ಶ್ರೀ ಎನ್.ಆರ್. ವೀರನಗೌಡ ಅಧ್ಯಕ್ಷರು ಎ.ಪಿ.ಎಂ.ಸಿ. ಸಿರುಗುಪ್ಪ ಪಥಚಲನೆಗೆ ಚಾಲನೆ ನೀಡಿದರು. ಶ್ರೀಮತಿ ಉಷಾರಾಣಿ ಮುಖ್ಯೋಪಾಧ್ಯಾಯರು ಎಸ್.ಇ.ಎಸ್. ಬಾಲಕಿಯರ ಪ್ರೌಢಶಾಲೆ, ಸಿರುಗುಪ್ಪ ಶ್ರೀ ದೊಡ್ಡನಗೌಡ ಎಸ್. ಗೌಡರ್ ಸ್ಥಳೀಯ ಸಂಸ್ಥೆ ಕಾರ್ಯದರ್ಶಿ. ಶ್ರೀ ಜಿ. ಕೃಷ್ಣ ಅಧೀಕ್ಷಕರು ಕ್ಷೇತ್ರ ಶಿಕ್ಷಣಾಧಿಕಾರಿ ಕಛೇರಿ, ಸಿರುಗುಪ್ಪ, ಶ್ರೀ ನಟರಾಜ ಸ್ವಾಮಿ ಖಜಾಂಚಿ, ಶ್ರೀಮತಿ ಮಲ್ಲೇಶ್ವರಿ ಜಿ. ಸಂಘಟನಾ ಆಯುಕ್ತರು, ಬಳ್ಳಾರಿ ಹಾಜರಿದ್ದರು. ನಂತರ ವೇದಿಕೆ ಕಾರ್ಯಕ್ರಮದಲ್ಲಿ ಪ್ರಾಸ್ತಾವಿಕವಾಗಿ ಶ್ರೀ ದೊಡ್ಡನಗೌಡ ಎಸ್. ಗೌಡರ್ ಕಾರ್ಯದರ್ಶಿ ಮಾತನಾಡಿದರು. ಕಾರ್ಯಕ್ರಮದ ಉದ್ಘಾಟನೆಯನ್ನು ಶ್ರೀ ಕೆ.ವಿ. ಶ್ರೀನಿವಾಸ ಮೂರ್ತಿ ಕ್ಷೇತ್ರ ಶಿಕ್ಷಣಾಧಿಕಾರಿ ಹಾಗೂ ಶ್ರೀ ದಮ್ಮೂರು ಸೋಮಪ್ಪ, ಜಿಲ್ಲಾ ಪಂಚಾಯತ್ ಸದಸ್ಯರು, ರಾರಾವಿ ಇವರುಗಳು ದೀಪ ಬೆಳಗಿಸುವುದರ ಮೂಲಕ ನೆರವೇರಿಸಿದರು. ಅಧ್ಯಕ್ಷತೆಯನ್ನು ಶ್ರೀ ಕೆ.ವಿ. ಶ್ರೀನಿವಾಸಮೂರ್ತಿ ಕ್ಷೇತ್ರ ಶಿಕ್ಷಣಾಧಿಕಾರಿ ಇವರು ವಹಿಸಿಕೊಂಡಿದ್ದರು. ಮುಖ್ಯ ಅತಿಥಿಗಳಾಗಿ ಶ್ರೀ ಅರುಣಪ್ರತಾಪರೆಡ್ಡಿ ಉಪಾಧ್ಯಕ್ಷರು ಕ.ರಾ.ಪ್ರಾ.ಶಿ.ರಾ.ಸಂ. ಬೆಂಗಳೂರು

ಶ್ರೀ ಪಿ. ಸೂರ್ಯಕಾಂತರೆಡ್ಡಿ ಅಧ್ಯಕ್ಷರು, ಕ.ರಾ.ಪ್ರಾ.ಶಿ.ತಾ.ಸಂ. ಸಿರುಗುಪ್ಪ, ಶ್ರೀ ರಾಮ್ ನಾಯಕ ತಾ.ಪಂ. ಸದಸ್ಯರು ಶ್ರೀ ನೂರುಲ್ಲಾ ಸದಸ್ಯರು. ಪುರಸಭೆ ಸಿರುಗುಪ್ಪ ಮತ್ತು ಶ್ರೀ ಕರಿಬಸಪ್ಪ, ಅಧ್ಯಕ್ಷರು, ಶ್ರೀ ಚೆನ್ನಪ್ಪ, ಇವರು ಆಗಮಿಸಿದ್ದರು. ನಂತರ ಸ್ಕೌಟ್ಸ್ ಮತ್ತು ಗೈಡ್ಸ್ ಮಕ್ಕಳಿಗಾಗಿ ರಸಪ್ರಶ್ನೆ, ರಂಗೋಲಿ, ಅಡಿಗೆ ಮಾಡುವ ಸ್ಪರ್ಧೆ, ಚಿತ್ರಕಲೆ, ಜಾನಪದನೃತ್ಯ ಹಾಗೂ ದೇಶ ಭಕ್ತಿ ಗೀತೆ, ಬಿ.ಪಿ.ರವರ ಬಗ್ಗೆ ಭಾಷಣ ಸ್ಪರ್ಧೆಯನ್ನು ಏರ್ಪಡಿಸಿ, ವಿಜೇತರಾದ ಮಕ್ಕಳಿಗೆ ಬಹುಮಾವನ್ನು ವಿತರಿಸಲಾಯಿತು. ಶ್ರೀ ನಟರಾಜಸ್ವಾಮಿ, ಸ್ಕೌಟ್ ಮಾಸ್ಟರ್ ಸ್ವಾಗತ ಮಾಡಿದರು. ವಂದನಾರ್ಪಣೆಯನ್ನು ಶೀ ಯೋಗಿಶ್, ಸ್ಕೌಟ್ ಮಾಸ್ಟರ್ ಮಾಡಿದರು. ಕಾರ್ಯಕ್ರಮ ನಿರೂಪಣೆಯನ್ನು ಶ್ರೀ ಶಿವುಕುಮಾರ ಸ್ಕೌಟ್ ಮಾಸ್ಟರ್ ಮಾಡಿದರು.

## ರಾಯಚೂರು

ದಿನಾಂಕ 08–03–2014 ರಿಂದ 09–03–2014 ರ ವರೆಗೆ ದೇವದುರ್ಗದ ಚಂದನಕೆರೆಯಲ್ಲಿ "ಸಮುದಾಯ ಅಭಿವೃದ್ಧಿ ಶಿಬಿರ"ವನ್ನು ಹಮ್ಮಿಕೊಳ್ಳಲಾಗಿತ್ತು. ಶಿಬಿರದ ಉದ್ಘಾಟನೆಯನ್ನು ಡಾನ್ ಬಾಸ್ಕೋ ಶಾಲೆಯ ಪ್ರಾಂಶುಪಾಲರಾದ ಫಾದರ್ ಕೆ.ಸಿ. ಮ್ಯಾಥ್ಯೂ ಮಾಡಿದರು. ಇವರು ಮಾತನಾಡಿ, ಸ್ಕೌಟ್ಸ್–ಗೈಡ್ಸ್‌ಗಳಲ್ಲಿ ಸಮುದಾಯದ ಜನರಲ್ಲಿ ಸ್ವಚ್ಛತೆಯ ಅರಿವು ಮೂಡಿಸಿ ಅಭಿವೃದ್ಧಿಯತ್ತ ಮುನ್ನಡೆಸಲು ಇಂಥ ಶಿಬಿರಗಳಿಂದ ಸಹಕಾರಿಯಾಗಲಿದೆ ಎಂದು ಹೇಳಿದರು. ಶಿಬಿರದಲ್ಲಿ ಭಾಗವಹಿಸಿದ 95 ಸ್ಕೌಟ್ಸ್–ಗೈಡ್ಸ್‌ಗಳು ಚಂದನಕೆರೆಯ ಗ್ರಾಮದಲ್ಲಿಯ ರಸ್ತೆ, ದೇವಸ್ಥಾನ, ಶಾಲೆಗಳ ಸುತ್ತಮುತ್ತಲಿನ ಸ್ಥಳಗಳನ್ನು ಸ್ವಚ್ಛಗೊಳಿಸಿದರು. ಶಿಬಿರದ ನಾಯಕರಾಗಿ ಶ್ರೀ ರಾವುತ್ ರಾವ್ ಬರೂರ. ಜಿಲ್ಲಾ ಸಂಘಟನಾ ಆಯುಕ್ತರು ಕಾರ್ಯನಿರ್ವಹಿಸಿದರು. ಈ ಸಂದರ್ಭದಲ್ಲಿ ಶ್ರೀ ದಾವಲ್ ಸಾಬ್ ಬಂಡಿ ಕಾರ್ಯದರ್ಶಿಗಳು ಸ್ಥಳೀಯ ಸಂಸ್ಥೆ ದೇವದುರ್ಗ, ಶ್ರೀ ಪ್ರವೀಣ್, ಸ್ಕೌಟ್ ಮಾಸ್ಟರ್, ಶ್ರೀಮತಿ ತಸ್ಲೀಮ್ ಗೈಡ್ ಕ್ಯಾಪ್ಟನ್ ಭಾಗವಹಿಸಿದ್ದರು.

***************

ದಿನಾಂಕ 08–03–2014 ರಿಂದ 09–03–2014 ರ ವರೆಗೆ ಡಾನ್ ಬಾಸ್ಕೋ ಶಾಲೆ ದೇವದುರ್ಗದಲ್ಲಿ ತೃತೀಯ ಸೋಪಾನ ಮತ್ತು ರಾಜ್ಯ ಪುರಸ್ಕಾರ ಸ್ಕೌಟ್ಸ್–ಗೈಡ್ಸ್‌ಗಳಿಗೆ 2 ದಿನಗಳ ಪೂರ್ವ ತಯಾರಿ ಶಿಬಿರವನ್ನು ಹಮ್ಮಿಕೊಳ್ಳಲಾಯಿತು. ಶಿಬಿರದ ನಾಯಕರಾಗಿ ಶ್ರೀ ಅಮರೇಶ ಕೋರಿ, ಗುಲ್ಬರ್ಗಾ ಇವರು ಆಗಮಿಸಿ ಶಿಬಿರವನ್ನು ನಡೆಸಿಕೊಟ್ಟರು. ಈ ಶಿಬಿರದಲ್ಲಿ 55 ಸ್ಕೌಟ್ಸ್, 33 ಗೈಡ್ಸ್‌ಗಳು ಭಾಗವಹಿಸಿದ್ದರು. ಸಹಾಯಕರಾಗಿ ಶ್ರೀ ದಾವಲ್ ಸಾಬ್ ಬಂಡಿ, ಶ್ರೀ ಬಸವರಾಜ ಕೊಪ್ಪಳ, ಸ್ಕೌಟ್ ಮಾಸ್ಟರ್ ಹಾಗೂ ಗೈಡ್ ವಿಭಾಗದ ನಾಯಕರಾಗಿ ಶ್ರೀಮತಿ ತಸ್ಲೀಮಾ ಬೇಗಂ ಇವರು ಕಾರ್ಯನಿರ್ವಹಿಸಿದರು.

*************

ದಿನಾಂಕ 14–03–2014 ಮತ್ತು 15–03–2014 ರಂದು ರಾಯಚೂರು ನಗರ ಸಂಚಾರ ಪೋಲೀಸ್ ಠಾಣೆ ವತಿಯಿಂದ ರೋವರ್ಸ್ ಮತ್ತು ರೇಂಜರ್ಸ್‌ಗಳಿಗೆ 2 ದಿನಗಳ "ಸಂಚಾರ ಸುವ್ಯವಸ್ಥೆ ಮತ್ತು ನಿಯಂತ್ರಣ" ತರಬೇತಿಯನ್ನು ಹಮ್ಮಿಕೊಳ್ಳಲಾಯಿತು. ತರಬೇತಿಯಲ್ಲಿ ಎಲ್.ವ್ಹಿ ಡಿ. ಮಹಾವಿದ್ಯಾಲಯದ

ಡಾ. ಎಮ್. ನಾಗಪ್ಪ ರೋವರ್ ಘಟಕ ಹಾಗೂ ಡಾ. ಸರೋಜಿನಿ ನಾಯ್ಡು ರೇಂಜರ್ ಟೀಮ್‌ಗಳಿಗೆ ಶ್ರೀ ಅಯ್ಯನಗೌಡ ಪಾಟೀಲ್ ಪಿ.ಎಸ್.ಐ., ಹಾಗೂ ಶ್ರೀ ನಾಗರಾಜ್ ಮಾತಾ ಪಿ.ಎಸ್.ಐ., ಇವರು ತರಬೇತಿ ನೀಡಿದರು. ಈ ಸಂದರ್ಭದಲ್ಲಿ ಶ್ರೀ ರಾವುತ್‌ರಾವ್ ಬರೂರ ಜಿಲ್ಲಾ ಸಂಘಟನಾ ಆಯುಕ್ತರು (ಸ್ಕೌ) ಹಾಗೂ ಡಾ. ದಾಸ್ ರೇಂಜರ್ ಲೀಡರ್ ಉಪಸ್ಥಿತರಿದ್ದರು.

## ಗುಲ್ಬರ್ಗ

ದಿನಾಂಕ 22-02-2014 ರಂದು ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ಜಿಲ್ಲಾ ಸಂಸ್ಥೆ, ಗುಲಬರ್ಗಾ ಹಾಗೂ ಚಂದ್ರಕಾಂತ ಪಾಟೀಲ ಸ್ಮಾರಕ ಇಂಗ್ಲೀಷ್ ಮಾಧ್ಯಮ (ಸಿ.ಬಿ.ಎಸ್.ಐ) ಶಾಲೆ ಗುಲಬರ್ಗಾ ಇವರ ಸಂಯುಕ್ತ ಆಶ್ರಯದಲ್ಲಿ ವಿಶ್ವಚಿಂತನಾ ದಿನಾಚರಣೆ ವಿಶ್ವ ಸಹೋದರ-ಸಹೋದರಿಯರ ದಿನಾಚರಣೆ ಅಂಗವಾಗಿ ಏರ್ಪಡಿಸಲಾದ ಕಾರ್ಯಕ್ರಮ ಸರ್ವಧರ್ಮ ಪ್ರಾರ್ಥನೆಯೊಂದಿಗೆ ಪ್ರಾರಂಭವಾಯಿತು.

ಉದ್ಘಾಟನೆಯನ್ನು ಶ್ರೀ ಬಿ.ಎಸ್. ಪರಮೇಶ, ಡಿ.ಡಿ.ಪಿ.ಐ., ರವರು ನೆರವೇರಿಸಿದರು. ಮುಖ್ಯ ಅತಿಥಿಗಳಾಗಿ ಶ್ರೀ ಬಿ.ಜಿ. ಪಾಟೀಲ ಅಧ್ಯಕ್ಷರು, ಎಸ್.ಬಿ. ಪಾಟೀಲ ಶಿಕ್ಷಣ ಸಂಸ್ಥೆ, ಗುಲಬರ್ಗಾ ಹಾಗೂ ಶ್ರೀಮತಿ ಜಯಶ್ರೀ ಗೋಗಿ, ಪ್ರಾಚಾರ್ಯರು, ಸ.ಪ.ಪೂ. ಮಹಾವಿದ್ಯಾಲಯ, ಗುಲಬರ್ಗಾ, ಭಾಗವಹಿಸಿದ್ದರು. ಅಧ್ಯಕ್ಷತೆಯನ್ನು ಶ್ರೀ ಎಸ್.ಪಿ. ಸುಳ್ಳದ್, ಜಿಲ್ಲಾ ಆಯುಕ್ತರು (ಸ್ಕೌ) ಭಾ.ಸ್ಕೌ.ಗೈ. ಜಿಲ್ಲಾ ಸಂಸ್ಥೆ, ಗುಲಬರ್ಗಾ ರವರು ವಹಿಸಿದ್ದರು.

ಪ್ರಾಸ್ತಾವಿಕವಾಗಿ ಶ್ರೀ ವೀರಭದ್ರಯ್ಯ ಯಡಹಳ್ಳಿ ಜಿಲ್ಲಾ ಸಂಘಟನಾ ಆಯುಕ್ತರು ಮಾತನಾಡಿದರು. ಕಾರ್ಯಕ್ರಮದಲ್ಲಿ ಶ್ರೀ ಚನ್ನವೀರಯ್ಯ ಸ್ವಾಮಿ, ಜಿಲ್ಲಾ ಕಾರ್ಯದರ್ಶಿಗಳು ಮತ್ತು ಶ್ರೀ ಅಯ್ಯಪ್ಪ ಅಂಬರಖೇಡ್, ಜಿಲ್ಲಾ ಖಜಾಂಚಿ ಮತ್ತು ಶ್ರೀಮತಿ ನಾಗರತ್ನ ಪಾಟೀಲ, ಡಿ.ಓ.,(ಗೈಡ್) ರವರು ಭಾಗವಹಿಸಿದ್ದರು.

ದಿನಾಂಕ 22-02-2014 ಸಾಯಂಕಾಲ ಸಮಾರೋಪ ಸಮಾರಂಭ ನೆರವೇರಿತು. ಕಾರ್ಯಕ್ರಮದಲ್ಲಿ ರಸಪ್ರಶ್ನೆ, ರಂಗೋಲಿ, ಮೆಹಂದಿ, ಗಾಯನ ಸ್ಪರ್ಧೆ ಇನ್ನು ಹಲವಾರು ಕಾರ್ಯಕ್ರಮದಲ್ಲಿ ಭಾಗವಹಿಸಿದವರಿಗೆ ಪ್ರಶಸ್ತಿ ಪತ್ರ ಹಾಗೂ ಪಾರಿತೋಷಕ ನೀಡಲಾಯಿತು.

ಕಾರ್ಯಕ್ರಮದಲ್ಲಿ ಅತಿಥಿಗಳಾಗಿ ಶ್ರೀಮತಿ ಕುಮುದಿನ ಶಿವಲೆಂಕಮಠ, ಶ್ರೀಮತಿ ಮಾಲಿನಿ ಮಟಮಾರಿ, ಶ್ರೀಮತಿ ಸುಷ್ಮಾ ಹಡಗಿಲಮಠ, ಶ್ರೀ ಅಯ್ಯಪ್ಪ ಅಂಬರಖೇಡ, ಭಾಗವಹಿಸಿದ್ದರು. ಅಧ್ಯಕ್ಷತೆಯನ್ನು ಶ್ರೀ ಚನ್ನವೀರಯ್ಯ ಸ್ವಾಮಿ ರವರು ವಹಿಸಿದ್ದರು.

## ಕಾರವಾರ

ಸ್ಕೌಟ್ಸ್-ಗೈಡ್ಸ್ ಲಾರ್ಡ್ ಬೇಡನ್ ಪೋವೆಲ್ ರವರ ಕನಸಿನ ಕೂಸಾಗಿತ್ತು. ಸ್ಕೌಟ್ಸ್ ಹಾಗು ಗೈಡ್ಸ್ ಚಳವಳಿ ವಿಶ್ವದಲ್ಲಿ ಪಸರಿಸಿ ಮಕ್ಕಳಲ್ಲಿ ಶಿಸ್ತು, ಸಂಯಮ ಹಾಗೂ ರಾಷ್ಟ್ರಭಕ್ತಿ ಬೆಳೆಸುತ್ತಿದೆ ಎಂದು ನ್ಯಾಯವಾದಿ ಶ್ರೀ ಸಂಜಯ ಜಿ. ಸಾಳುಂಕೆ ಹೇಳಿದರು.

ಕಾರವಾರದ ಗುರುಭವನದಲ್ಲಿ ಹಮ್ಮಿಕೊಂಡ ವಿಶ್ವ ಸ್ಕೌಟ್ಸ್ ಮತ್ತು ಗೈಡ್ಸ್ ದಿನಾಚರಣೆ ಉದ್ಘಾಟಿಸಿ ಅವರು ಮಾತನಾಡಿದರು. ಶಿಸ್ತು, ಸಂಯಮ ಹಾಗೂ ರಾಷ್ಟ್ರಭಕ್ತಿಯಿಂದ ವಿಶ್ವ ಬಾಂಧವ್ಯ ಬೆಳೆಯುತ್ತದೆ ಎಂದರು.

ಸ್ಕೌಟ್ ಮಾಸ್ಟರ್ ಶ್ರೀ ಮನ್ಸೂರ ಮುಲ್ಲಾ ಸ್ಕೌಟ್ ಚಳವಳಿ ಮುಖಾಂತರ ಮಕ್ಕಳ ಅಭಿವೃದ್ಧಿ, ಯುವಕರ ಪಾತ್ರ ಜವಾಬ್ದಾರಿ ಅಧಿಕವಾಗುತ್ತದೆ ಎಂದು ಹೇಳಿದರು. ಗೈಡ್ಸ್ ಶಿಕ್ಷಕಿ ಶ್ರೀಮತಿ ಶೋಭಾ ವೆರ್ಣೇಕರ ಹಾಜರಿದ್ದರು. ಶ್ರೀ ಗಣೇಶ ಬಿಷ್ಟಣ್ಣನವರ ಸ್ವಾಗತಿಸಿದರು. ಶ್ರೀ ರಾಜು ದುರ್ಗೇಕರ ವಂದಿಸಿದರು.

## ಚಿತ್ರದುರ್ಗ

ದಿನಾಂಕ 08-03-2014 ರಂದು ಟಿ.ಪಿ.ಸಿ.ಕೆ. ಬಾಲಿಕಾ ಪ್ರೌಢ ಶಾಲೆ ಹೊಳಲ್ಕೆರೆ, ಚಿತ್ರದುರ್ಗ ಜಿಲ್ಲೆ ಇಲ್ಲಿನ ಶಾಲೆಯ ಓನಕೆ ಓಬವ್ವ ಗೈಡ್ಸ್ ಕಂಪನಿಯ ವತಿಯಿಂದ ಅಂತಾರಾಷ್ಟ್ರೀಯ ಮಹಿಳಾ ದಿನಾಚರಣೆಯನ್ನು ಆಚರಿಸಲಾಯಿತು. ಶ್ರೀ ಪಿ.ಕೆ. ರಾಜಪ್ಪ ದೈಹಿಕ ಶಿಕ್ಷಣ ವಿಷಯ ಪರಿವೀಕ್ಷಕರು ಹೊಳಲ್ಕೆರೆ ಇವರು ಶಾಲೆಯ ಮುಖ್ಯೋಪಾಧ್ಯಾಯರಾದ ಶ್ರೀ ಎನ್.ಬಿ. ಮಲ್ಲಪ್ಪನವರ ಅಧ್ಯಕ್ಷತೆಯಲ್ಲಿ ಕಾರ್ಯಕ್ರಮವನ್ನು ಉದ್ಘಾಟಿಸಿದರು. ಉಪಸ್ಥಿತರಿದ್ದ ಸಹ ಶಿಕ್ಷಕರಾದ ಶ್ರೀಮತಿ ಗಂಗಮ್ಮ ಮುಚಡಿ ಸಮಾಜದಲ್ಲಿ ಸಾಧನೆಗೈದ ವೀರಮಹಿಳೆಯರನ್ನು ಕುರಿತು ಮಾತನಾಡಿದರು. ಈ ಸಂದರ್ಭದಲ್ಲಿ ಮಹಿಳಾ ದಿನಾಚರಣೆ ಕುರಿತು ಗೈಡ್ಸ್‌ಗಳಿಗೆ ಭಾಷಣ ಸ್ಪರ್ಧೆ ಏರ್ಪಡಿಸಲಾಗಿತ್ತು. ಶ್ರೀಮತಿ ವಹೀದಾ ಬೇಗಂ ಗೈಡ್ಸ್ ಕ್ಯಾಪ್ಟನ್ ಎಲ್ಲರನ್ನು ಸ್ವಾಗತಿಸಿದರು. ಶ್ರೀ ಹೆಚ್.ಎಸ್. ಹಾಲೇಶ್ ಸ್ಕೌಟ್ ಮಾಸ್ಟರ್ ಎಲ್ಲರಿಗೂ ವಂದಿಸಿದರು. ಗೈಡ್ ಕುಮಾರಿ ರಕ್ಷತಾ ಕುಂಬಾರ ಕಾರ್ಯಕ್ರಮ ನಿರೂಪಿಸಿದರು. 125 ಸ್ಕೌಟ್ಸ್, ಗೈಡ್ಸ್ ಮತ್ತು ಇತರ ವಿದ್ಯಾರ್ಥಿ-ವಿದ್ಯಾರ್ಥಿನಿಯರು ಭಾಗವಹಿಸಿದರು.

## ಉಡುಪಿ

ದಿನಾಂಕ 22-02-2014 ರಂದು ಲಾರ್ಡ್ ಬೇಡನ್ ಪಾವೆಲ್ ಅವರ ಜನ್ಮ ದಿನಾಚರಣೆಯ ಅಂಗವಾಗಿ ಚಿಂತನಾ ದಿನವನ್ನು ರೋಟರಿ ಸ್ಕೌಟ್ ಭವನದಲ್ಲಿ ಆಚರಿಸಲಾಯಿತು. ಜಿಲ್ಲಾ ಮುಖ್ಯ ಆಯುಕ್ತರಾದ ಶ್ರೀ ಕೆ.ಬಿ. ರಾವ್ ಅಧ್ಯಕ್ಷತೆಯನ್ನು ವಹಿಸಿದ್ದರು. ಶ್ರೀ ಶೇಖರ್ ಪೂಜಾರಿ, ಜಿಲ್ಲಾ ಕಾರ್ಯದರ್ಶಿ ಎಲ್ಲರನ್ನು ಸ್ವಾಗತಿಸಿದರು. ಶ್ರೀಮತಿ ನಿರ್ಮಲಾ, ದೈಹಿಕ ಶಿಕ್ಷಕಿ, ಸೈಂಟ್ ಸಿಸಿಲೀಸ್ ಆ.ಮಾ. ಶಾಲೆ ಇವರು ಮುಖ್ಯ ಅತಿಥಿಯಾಗಿ ಭಾಗವಹಿಸಿದ್ದರು. ಶ್ರೀ ವಿ.ಜಿ. ಬೈಕಾಡಿ ಜಿಲ್ಲಾ ಸಂಘಟಕ ಶ್ರೀ ನಿತೀನ್ ಅಮೀನ್ "ಶಾಂತಿ ದೂತ" ರ ಬಗ್ಗೆ ವಿವರಿಸಿದರು. ಮತ್ತು ಶ್ರೀಮತಿ ಸುಮನ ಶೇಖರ್ ಗೈಡರ್, ಶ್ರೀ ಐನೀಶ್ ಡಿಸೋಜ, ಲೇಡಿ ಸ್ಕೌಟರ್ ಉಪಸ್ಥಿತರಿದ್ದರು.

*************

ದಿನಾಂಕ 26-02-2014 ರಂದು ಜಿಲ್ಲಾ ತರಬೇತಿ ಕೇಂದ್ರ ಕಾರಂತ ಕಲಾ ಗ್ರಾಮ, ಪ್ರಗತಿ ನಗರ, ಮಣಿಪಾಲ ಇಲ್ಲಿ ಮಿಲಾಗ್ರಿಸ್ ಆಂಗ್ಲ ಮಾಧ್ಯಮ ಶಾಲೆಯ ಕಬ್, ಬುಲ್ ಬುಲ್ ವಿದ್ಯಾರ್ಥಿಗಳ ಶಿಬಿರವು ನಡೆಯಿತು.

ಶಿಬಿರದಲ್ಲಿ ವಿದ್ಯಾರ್ಥಿಗಳಿಗೆ ಗಂಟುಗಳು, ಸಾಹಸಮಯ ಕ್ರೀಡೆಗಳು, ವ್ಯಾಯಾಮ, ಧ್ವಜ ಸ್ತಂಭ ನಿರ್ಮಾಣ, ಹೊರಸಂಚಾರ, ಟ್ರಕ್ಕಿಂಗ್ ಮೊದಲಾದುವುಗಳನ್ನು ಹೇಳಿಕೊಡಲಾಯಿತು. ಮಿಲಾಗ್ರಿಸ್ ಶಲೆಯ ಫ್ಲಾಕ್ ಲೀಡರ್‌ಗಳಾದ ಶ್ರೀಮತಿ ಐರಿನ್, ಶ್ರೀಮತಿ ಫೆಲ್ಸಿ, ಕುಮಾರಿ ಪಾವನಿ ಶಿಬಿರದಲ್ಲಿ ಭಾಗವಹಿಸಿದ್ದರು. ಶ್ರೀ ನಿತಿನ್ ಅಮಿನ್, ಜಿಲ್ಲಾ ಸಂಘಟಕರು ಶಿಬಿರದಲ್ಲಿ ಸಹಕರಿಸಿದರು.

**************

ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ಜಿಲ್ಲಾ ಸಂಸ್ಥೆ ಮತ್ತು ಮಿಲಾಗ್ರಿಸ್ ಆಂಗ್ಲ ಮಾಧ್ಯಮ ಶಾಲೆ ಕಲ್ಯಾಣಪುರ ಇವರ ಜಂಟಿ ಆಶ್ರಯದಲ್ಲಿ ಚುನಾವಣಾ ಜಾಗೃತಿ ಜಾಥಾ ನಡೆಯಿತು. ಮಿಲಾಗ್ರಿಸ್ ಆಂಗ್ಲ ಮಾಧ್ಯಮ ಶಾಲೆಯ ಸ್ಕೌಟ್ಸ್-ಗೈಡ್ಸ್ ವಿದ್ಯಾರ್ಥಿಗಳು ಅಲೆವೂರು ಗ್ರಾಮದಲ್ಲಿ, ಮನೆ ಮನೆಗಳಿಗೆ ತೆರಳಿ ಮತದಾನದಲ್ಲಿ ಭಾಗವಹಿಸುವಂತೆ ಜಾಗೃತಿ ಮೂಡಿಸಿದರು.

ಕಾರ್ಯಕ್ರಮದಲ್ಲಿ ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ಜಿಲ್ಲಾ ಸಂಘಟಕ ಶ್ರೀ ನಿತಿನ್ ಅಮೀನ್, ಮಿಲಾಗ್ರಿಸ್ ಆಂಗ್ಲ ಮಾಧ್ಯಮ ಶಾಲೆಯ ಸ್ಕೌಟ್ ಮಾಸ್ಟರ್ ಶ್ರೀ ವಿನಯ್ ಶೇಟ್, ಕುಮಾರಿ ಐನೇರ್ಶ ಡಿಸೋಜ ಮತ್ತು ಗೈಡ್ ಕ್ಯಾಪ್ಟನ್ ಶ್ರೀಮತಿ ಪಲ್ಲವಿ ಸಹಕರಿಸಿದರು.

**************

ದಿನಾಂಕ 01-04-2014 ರಿಂದ 05-04-2014 ರ ವರೆಗೆ ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ಜಿಲ್ಲಾ ಸಂಸ್ಥೆ ವತಿಯಿಂದ ಡಾ॥ ವಿ.ಎಸ್. ಆಚಾರ್ಯ ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ಜಿಲ್ಲಾ ತರಬೇತಿ ಕೇಂದ್ರ ಪ್ರಗತಿನಗರ ಅಲೆವೂರು ಉಡುಪಿ ಇಲ್ಲಿ 'ಬನ್ನಿ ಲೀಡರ್' ತರಬೇತಿ ಶಿಬಿರ ನಡೆಸಲಾಯಿತು.

ಡಾ॥ ಗೌರಿ (ಮಕ್ಕಳ ತಜ್ಞೆ) ಇವರು 3 ರಿಂದ 5 ವರ್ಷ ವಯೋಮಿತಿ ಒಳಗಿನ ಮಕ್ಕಳ ದೈಹಿಕ ಹಾಗೂ ಮಾನಸಿಕ ಬೆಳವಣಿಗೆಯ ಬಗ್ಗೆ ಸಂಪೂರ್ಣ ಮಾಹಿತಿ ನೀಡಿದರು. ಬನ್ನಿ ಲೀಡರ್ ಮಾಡಬೇಕಾದ ಕೆಲಸ ಹಾಗೂ ಕರ್ತವ್ಯವನ್ನು ಶಿಬಿರದ ನಾಯಕಿ ಶ್ರೀಮತಿ ಪಿ. ಸರೋಜ ಇವರು ಮನವರಿಕೆ ಮಾಡಿದರು.

ಸಮಾರೋಪ ಸಮಾರಂಭದಲ್ಲಿ ಜಿಲ್ಲಾ ಕಾರ್ಯದರ್ಶಿ ಶ್ರೀ ಕಲ್ಮಾಡಿ ಶೇಖರ್ ಪೂಜಾರಿ ಸ್ವಾಗತಿಸಿದರು. ಶ್ರೀಮತಿ ಪಿ. ಸರೋಜ ರವರು ಶಿಬಿದ ವರದಿ ನೀಡಿದರು. ರಾಜ್ಯ ಗೈಡ್ ಆಯುಕ್ತೆಯವರಾದ ಶ್ರೀಮತಿ ಶಾಂತ ವಿ. ಆಚಾರ್ಯರವರು ಅಧ್ಯಕ್ಷೀಯ ಭಾಷಣದಲ್ಲಿ ಬನ್ನಿ ಲೀಡರ್‌ಗಳಿಗೆ ಶುಭ ಹಾರೈಸಿದರು. ಜಿಲ್ಲಾ ಮುಖ್ಯ ಆಯುಕ್ತರಾದ ಶ್ರೀ ಕೆ.ಬಿ. ರಾವ್ ಮಕ್ಕಳು ದೇವರಂತೆ ಅವರನ್ನು ದೇಶದ ಉತ್ತಮ ಪ್ರಜೆ, ಮಾಡುವ ಮೊದಲ ಹೆಜ್ಜೆಯು ಕಾರ್ಯ ನಿಮ್ಮ ಮೇಲಿದೆ ಎಂದು ಶುಭ ಹಾರೈಸಿದರು.

ಜಿಲ್ಲಾ ಸ್ಕೌಟ್ಸ್ ಆಯುಕ್ತರಾದ ಶ್ರೀ ಎಡ್ವಿನ್ ಆಳ್ವ ಬನ್ನಿ ಟಮ್‌ಟೋಲ ಜಿಲ್ಲೆಯಾದ್ಯಂತ ಪಸರಿಸುವಂತೆ ಕರೆ ನೀಡಿದರು. ಜಿಲ್ಲಾ ಗೈಡ್ ಆಯುಕ್ತೆಯವರಾದ ಶ್ರೀಮತಿ ರಾಜಲಕ್ಷ್ಮಿ ಡಿ. ಶೆಟ್ಟಿಯವರು ಶುಭ ಹಾರೈಸಿದರು. ಸಹಶಿಬಿರ ನಾಯಕಿಯಾಗಿ ಶ್ರೀಮತಿ ಎನ್. ಕೆ. ಛಾಯಾ ಸಹಕರಿಸಿದರು. ಸ್ಥಾನೀಯ ಆಯುಕ್ತರಾದ ಶ್ರೀ ಆನಂದ ಅಡಿಗರು ಧನ್ಯವಾದ ಸಲ್ಲಿಸಿದರು. ಸ್ಥಾನೀಯ ಆಯುಕ್ತರಾದ ಶ್ರೀ ರಾಜಗೋಪಾಲ ಆಚಾರ್ಯರವರು ಉಪಸ್ಥಿತರಿದ್ದರು. ಜಿಲ್ಲಾ ಸಂಘಟಕರಾದ ಶ್ರೀ ನಿತಿನ್ ಅಮಿನ್ ಕಾರ್ಯಕ್ರಮ ಸಂಘಟಿಸಿದರು.

## ಬಿಜಾಪುರ

"ವಿಜಾಪುರ ನಗರ ವಲಯ ಮತ್ತು ಗ್ರಾಮೀಣ ವಲಯದ ಪ್ರತಿಯೊಂದು ಶಾಲೆಯಲ್ಲಿ ಸ್ಕೌಟ್ ಮತ್ತು ಗೈಡ್ಸ್ ಘಟಕಗಳನ್ನು ಪ್ರಾರಂಭಿಸುವದು ಅನಿವಾರ್ಯವಾಗಿದೆ" ಎಂದು ವಿಜಾಪುರ ನಗರ ವಲಯದ ಕ್ಷೇತ್ರ ಶಿಕ್ಷಣಾಧಿಕಾರಿಗಳಾದ ಶ್ರೀಮತಿ ಸಾಹೀರಾಬಾನು ಖಾನುಂ ಅವರು ಹೇಳಿದರು.

ದಿನಾಂಕ 24-03-2014 ರಂದು ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ಜಿಲ್ಲಾ ಕಾರ್ಯಾಲಯದಲ್ಲಿ ನಡೆದ ಮೂಲ ತರಬೇತಿಯ ಪ್ರಮಾಣಪತ್ರ ವಿತರಣೆ, ಸನ್ನದು ಪತ್ರ ವಿತರಣೆ, ರಾಜ್ಯಮಟ್ಟದ ಪ್ರತಿಭಾ ಕಾರಂಜಿಯಲ್ಲಿ ಸೇವೆ ಸಲ್ಲಿಸಿದ ಸ್ಕೌಟರ್ಸ್ ಹಾಗೂ ಗೈಡರ್ಸ್‌ಗಳಿಗೆ ಅಭಿನಂದನಾ ಸಮಾರಂಭ ಮತ್ತು ನೂತನ ಕ್ಷೇತ್ರ ಶಿಕ್ಷಣಾಧಿಕಾರಿಗಳ ಹಾಗೂ ಕ್ಷೇತ್ರ ಸಮನ್ವಯಾಧಿಕಾರಿಗಳ ಸನ್ಮಾನ ಸಮಾರಂಭ ಉದ್ದೇಶಿಸಿ ಮಾತನಾಡುತ್ತಿದ್ದರು. ಇನ್ನೋರ್ವ ಮುಖ್ಯ ಅತಿಥಿಗಳಾಗಿ ಸನ್ಮಾನ ಸ್ವೀಕರಿಸಿದ ಗ್ರಾಮೀಣ ವಲಯದ ಕ್ಷೇತ್ರ ಶಿಕ್ಷಣಾಧಿಕಾರಿಗಳಾದ ಶ್ರೀ ಎಮ್.ಜಿ. ಬೆಳ್ಳೆನವರ ಮಾತನಾಡಿ ಪ್ರತಿ ಶಾಲೆಯಲ್ಲಿ ಕಬ್ಸ್-ಬುಲ್ ಬುಲ್ಸ್, ಸ್ಕೌಟ್ಸ್-ಗೈಡ್ಸ್, ರೋವರ್ಸ್-ರೇಂಜರ್ಸ್, ಘಟಕಗಳನ್ನು ಪ್ರಾರಂಭಿಸಿ ಮಾದರಿ ತಾಲ್ಲೂಕನ್ನಾಗಿ ಮಾಡಲು ಕಡ್ಡಾಯವಾಗಿ ಆದೇಶ ನೀಡಿ ಪ್ರತಿ ಹಂತದಲ್ಲಿ ಪರಿಶೀಲನೆ ಮಾಡಿ ಉತ್ತಮ ರೀತಿಯಲ್ಲಿ ಕಾರ್ಯ ನಿರ್ವಹಿಸಲು ಎಲ್ಲ ರೀತಿ ಕ್ರಮ ಕೈಗೊಳ್ಳಲಾಗುವುದು ಎಂದರು.

ಮತ್ತೋರ್ವ ಮುಖ್ಯ ಅತಿಥಿಗಳಾದ ಡಿ.ಡಿ.ಪಿ.ಐ., ಕಚೇರಿಯ ವಿಷಯ ಪರೀಕ್ಷಕರಾದ ಶ್ರೀ ನಾಗೇಂದ್ರ ಸಿನ್ನೂರ ಮಾತನಾಡಿ ರಾಜ್ಯ ಮಟ್ಟದ ಪ್ರತಿಭಾ ಕಾರಂಜಿಯಲ್ಲಿ ಸಾರ್ಥಕ ಸೇವೆ ಸಲ್ಲಿಸಿದ ಸ್ಕೌಟ್ಸ್ ಮತ್ತು ಗೈಡ್ಸ್ ತಂಡಕ್ಕೆ ಸಾರ್ವಜನಿಕ ಶಿಕ್ಷಣ ಇಲಾಖೆ ವತಿಯಿಂದ ಅಭಿನಂದನೆ ಸಲ್ಲಿಸಿದರು.

ಕ್ಷೇತ್ರ ಸಮನ್ವಯಾಧಿಕಾರಿಗಳಾದ ಶ್ರೀಮತಿ ಗೀತಾ ಕುಲಕರ್ಣಿ, ಶ್ರೀ ಐ.ಎಫ್. ಅರಳಿ ಮಟ್ಟಿ ಅವರನ್ನು ಸನ್ಮಾನಿಸಲಾಯಿತು. ಅಧ್ಯಕ್ಷತೆಯನ್ನು ಜಿಲ್ಲಾ ಮುಖ್ಯ ಆಯುಕ್ತರಾದ ಡಾ॥ ಸತೀಶ ಜಿಗಜಿನ್ನಿ ವಹಿಸಿದ್ದರು. ಜಿಲ್ಲಾ ಗೈಡ್ಸ್ ಆಯುಕ್ತರಾದ ಶ್ರೀಮತಿ ಭಾಗ್ಯಶ್ರೀ ಸಿಂಧಗೀಕರ್, ಸಹ ಕಾರ್ಯದರ್ಶಿ ಶ್ರೀ ಶರಣು ಸಬರದ, ಶಿಕ್ಷಕರ ಸಂಘದ ತಾಲ್ಲೂಕು ಕಾರ್ಯದರ್ಶಿ ಎಸ್.ಎಸ್. ಬೇನೂರ, ಶ್ರೀ ಆರ್.ಎಂ. ಮೇತ್ರಿ ಶ್ರೀ ಮೆಂಡೆಗಾರ ಉಪಸ್ಥಿತರಿದ್ದರು. ತಾಲೂಕು ಕಾರ್ಯದರ್ಶಿ ಶ್ರೀ ಪಿ.ಎಸ್. ಕುಂಬಾರ ಸ್ವಾಗತಿಸಿದರು. ಜಿಲ್ಲಾ ಸಂಘಟನಾ ಆಯುಕ್ತರು ಹಾಗೂ ಶಿಕ್ಷಕರ ಸಂಘದ ಜಿಲ್ಲಾ ಖಜಾಂಚಿಗಳಾದ ಶ್ರೀ ಜಗದೀಶ ಬೋಳಸೂರ ನಿರೂಪಿಸಿದರು. ಜಿಲ್ಲಾ ಸಂಘಟನಾ ಆಯುಕ್ತರಾದ ಶ್ರೀ ಸುನೀಲ ಬಿರಾದಾರ ಪಾಟೀಲ ವಂದಿಸಿದರು.

************

ದಿನಾಂಕ 28–03–2014 ರಂದು ಎಸ್.ಜಿ.ವಿ.ಸಿ. ಮುದ್ದೇಬಿಹಾಳ ಮಹಾವಿದ್ಯಾಲಯದಲ್ಲಿ "ಮತದಾನ ಜಾಗೃತಿ ಕಾರ್ಯಕ್ರಮ"ವನ್ನು ನೆರವೇರಿಸಲಾಯಿತು. ಮಹಾವಿದ್ಯಾಲಯದ ವಿದ್ಯಾರ್ಥಿ/ನಿಯರೊಂದಿಗೆ ಸ್ಥಳೀಯ ಸರಕಾರಿ ಮಹಾವಿದ್ಯಾಲಯದ ಪ್ರಾಚಾರ್ಯರು, ಸಿಬ್ಬಂದಿಯವರು ಮತ್ತು ವಿದ್ಯಾರ್ಥಿ/ನಿಯರು ಹಾಗೂ ತಾಲೂಕ ಅಧಿಕಾರಿಗಳು ರ್‍ಯಾಲಿಯಲ್ಲಿ ಭಾಗವಹಿಸಿ ಜಾಗೃತಿ ಕಾರ್ಯಕ್ರಮವನ್ನು ಮಾಡಲಾಯಿತು. ಎನ್.ಎಸ್.ಎಸ್. ಅಧಿಕಾರಿಯಾದ ಪ್ರೊ. ಎಸ್.ಎನ್. ಬಿದರಕುಂದಿಯವರು ಸ್ವಾಗತ ಮಾಡಿದರು. ಪ್ರೊ. ಎಸ್.ಎಸ್. ಹೂಗಾರ ರೋವರ್ ಲೀಡರ್ ಪ್ರಾಸ್ತಾವಿಕವಾಗಿ ಮಾತನಾಡಿದರು. ಪ್ರೊ. ಎನ್.ಬಿ. ಹೊಸಮನಿಯವರು ಮತದಾನ ಮಹತ್ವವನ್ನು ಕುರಿತು ತಿಳಿಸಿದರು. ಎಲ್ಲ ವಿದ್ಯಾರ್ಥಿ/ ನಿಯರಿಗೆ ಸಿಬ್ಬಂದಿಯವರಿಗೆ ಮತದಾನ ಪ್ರತಿಜ್ಞಾನವಿಧಿಯನ್ನು ಬೋಧಿಸಲಾಯಿತು. ಪ್ರೊ. ಪಿ.ಎಚ್. ಉಪ್ಪಲದಿನ್ನಿಯವರು ವಂದಿಸಿದರು. ಸುಮಾರು 300 ಸ್ಕೌಟ್ಸ್–ಗೈಡ್ಸ್‌ಗಳು ಮೆರವಣಿಗೆಯಲ್ಲಿ ಭಾಗವಹಿಸಿದ್ದರು. ಪ್ರೊ. ಎ.ಟಿ. ಪಾಟೀಲ, ಪ್ರೊ. ಎಚ್.ಜಿ. ಪಾಟೀಲ, ಪ್ರೊ. ಎಂ.ಆಯ್. ಬಿರಾದಾರ, ಪ್ರೊ. ರವಿ ನಂದೇಪ್ಪನವರ ಮುಂತಾದವರು ಭಾಗವಹಿಸಿದ್ದರು.

## ಚಿಕ್ಕಮಗಳೂರು

ದಿನಾಂಕ 07–04–2014 ರಂದುಜಿಲ್ಲಾ ಸ್ಕೌಟ್ಸ್ ಮತ್ತು ಗೈಡ್ ಸಂಸ್ಥೆಯಿಂದ ಜಿಲ್ಲೆಯ ರೋವರ್ಸ್ ಮತ್ತು ರೇಂಜರ್ಸ್‌ಗಳಿಗಾಗಿ ಒಂದು ದಿನದ ಪುನಶ್ಚೇತನ ಶಿಬಿರವನ್ನು ಜಿಲ್ಲಾ ಸ್ಕೌಟ್ಸ್ ಭವನದಲ್ಲಿ ಹಮ್ಮಿಕೊಳ್ಳಲಾಗಿತ್ತು.

ಕಾರ್ಯಕ್ರಮದ ಅಧ್ಯಕ್ಷತೆಯನ್ನು ಜಿಲ್ಲಾ ಮುಖ್ಯ ಆಯುಕ್ತರಾದ ಶ್ರೀ ಎಂ.ಎನ್. ಷಡಕ್ಷರಿ ವಹಿಸಿ ಮಾತನಾಡುತ್ತ ಉತ್ತಮ ಪ್ರಜೆಗಳಾಗಲು ಸ್ಕೌಟ್ಸ್–ಗೈಡ್ಸ್‌ನ ಚಳುವಳಿಯಲ್ಲಿ ಭಾಗವಹಿಸುವುದರೊಂದಿಗೆ ಸಮಾಜ ಸೇವೆ ಮಾಡಬೇಕೆಂದು ಕರೆ ನೀಡಿದರು.

ಮಾಜಿ ಜಿಲ್ಲಾ ಮುಖ್ಯ ಆಯುಕ್ತರು ಹಾಗೂ ಸಂಸ್ಥೆಯ ಹಿರಿಯರಾದ ಶ್ರೀ ಬಿ.ಆರ್. ಸಚ್ಚಿದಾನಂದ ಕಾರ್ಯಕ್ರಮವನ್ನು ಉದ್ಘಾಟಿಸಿ ಮಾತನಾಡಿ ವಿದ್ಯಾರ್ಥಿಗಳು ನಾಯಕತ್ವ ಗುಣಗಳನ್ನು ಬೆಳೆಸಿಕೊಳ್ಳುವ ಬಗ್ಗೆ ಮತ್ತು ಸಮಾಜ ಸೇವೆ ಮಾಡುವ ಬಗ್ಗೆ ಸಲಹೆ ನೀಡಿದರು.

ಕಾರ್ಯಕ್ರಮದಲ್ಲಿ ವಾರ್ತಾ ಇಲಾಖೆಯ ಸಹಾಯಕ ನಿರ್ದೇಶಕರಾದ ಶ್ರೀ ಬಿ. ಮಂಜುನಾಥ ಮಾತನಾಡಿ ಸಾರ್ವಜನಿಕರಲ್ಲಿ ಮತದಾನದ ಅರಿವನ್ನು ಮೂಡಿಸಲು ವಿದ್ಯಾರ್ಥಿಗಳು ತೆಗೆದುಕೊಳ್ಳಬಹುದಾದ ಕ್ರಮಗಳ ಬಗ್ಗೆ ವಿವರಿಸಿದರು. ಶಿಬಿರದ ನಾಯಕರಾದ ಶ್ರೀ ಎಲ್.ಟಿ. ಲೋಕೇಶ್ ವಿದ್ಯಾರ್ಥಿಗಳಿಗೆ ತರಬೇತಿ ನಿಡಿದರು. ಕಾರ್ಯಕ್ರಮದಲ್ಲಿ ಜಿಲ್ಲಾ ತರಬೇತಿ ಆಯುಕ್ತರಾದ ಶ್ರೀಮತಿ ಸಂಧ್ಯಾ ರಾಣಿ, ಜಿಲ್ಲಾ ಕಾರ್ಯದರ್ಶಿಗಳಾದ ಶ್ರೀ ಹೆಚ್.ಪಿ. ಶಶಿಧರರಾವ್, ಜಿಲ್ಲಾ ಗೈಡ್ಸ್ ಆಯುಕ್ತರಾದ ಶ್ರೀಮತಿ ಸಿ.ಎಂ. ಪಿಂಟೋ ಹಾಗೂ ಜಿಲ್ಲಾ ಸಂಘಟನಾ ಆಯುಕ್ತರಾದ ಶ್ರೀ ಬಿ.ಎನ್. ಕಿರಣ್ ಕುಮಾರ್ ತಾಲ್ಲೂಕ್ ಸಂಯೋಜಕರಾದ ಶ್ರೀ ಬಿ.ಎಲ್ ಮೋಹನ್ ಹಾಗು ಜಿಲ್ಲೆಯ ವಿವಿಧ ಕಾಲೇಜುಗಳಿಂದ ಆಗಮಿಸಿದ ರೋವರ್ಸ್ ಸ್ಕೌಟ್ಸ್ ಲೀಡರ್ ಮತ್ತು ರೇಂಜರ್ಸ್ ಲೀಡರ್‌ಗಳು ಉಪಸ್ಥಿತರಿದ್ದರು.

ಹಿರಿಯ ಸ್ಕೌಟರ್ ಆದ ಶ್ರೀ ನೀಲಕಂಠಾಚಾರ್ ಸ್ವಾಗತಿಸಿದರು ಹಾಗು ಸಹಾಯಕ ಆಯುಕ್ತರಾದ ಶ್ರೀಮತಿ ಬಿ.ಸಿ. ಭಾರತಿ ವಂದಿಸಿದರು.

***********

ದಿನಾಂಕ 09-04-2014 ರಂದು ಜಿಲ್ಲಾಡಳಿತ, ವಾರ್ತಾ ಮತ್ತು ಪ್ರಚಾರ ಇಲಾಖೆ ಹಾಗೂ ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ಜಿಲ್ಲಾ ಸಂಸ್ಥೆಯ ಸಂಯುಕ್ತ ಆಶ್ರಯದಲ್ಲಿ ರೋವರ್ಸ್ ಮತ್ತು ರೇಂಜರ್ಸ್‌ಗಳು ಸಾರ್ವಜನಿಕರಲ್ಲಿ ಮತದಾನದ ಅರಿವು ಮೂಡಿಸಲು ಕಾರ್ಯಕ್ರಮವನ್ನು ಹಮ್ಮಿಕೊಳ್ಳಲಾಯಿತು. ಅದರಂತೆ ಪಟ್ಟಣದ ಶಂಕರಪುರ ಬಡಾವಣೆಯಲ್ಲಿ ಸಂಚರಿಸಿ, ಮತದಾನದ ಮಹತ್ವದ ಬಗ್ಗೆ ಕರಪತ್ರಗಳನ್ನು ನೀಡುವುದರ ಮೂಲಕ ಕಡ್ಡಾಯ ಮತದಾನ ಮಡುವ ಬಗ್ಗೆ ಅರಿವು ಮೂಡಿಸಲಾಯಿತು.

ಕಾರ್ಯಕ್ರಮದಲ್ಲಿ ಜಿಲ್ಲಾ ಪಂಚಾಯತಿಯ ಕಾರ್ಯ ನಿರ್ವಾಹಕ ಅಧಿಕಾರಿಗಳು. ವಾರ್ತಾ ಇಲಾಖೆಯ ಅಧಿಕಾರಿಗಳು, ನಗರ ಸಭೆಯ ಆಯುಕ್ತರುಗಳು ಮತ್ತು ಸ್ವಿಪ್ ಕಮಿಟಿಯ ಸದಸ್ಯರುಗಳು, ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ಜಿಲ್ಲಾ ಸಂಸ್ಥೆಯ ಮುಖ್ಯ ಆಯುಕ್ತರಾದ ಶ್ರೀ ಎಂ.ಎನ್. ಷಡಕ್ಷರಿ, ಎ.ಡಿ.ಸಿ., ಶ್ರೀಮತಿ ಭಾರತಿ, ಡಿ.ಟಿ.ಸಿ., ಶ್ರೀಮತಿ ಸಂಧ್ಯಾರಾಣಿ, ಹಿರಿಯ ಸ್ಕೌಟರ್ ಶ್ರೀ ನೀಲಕಂಠಾಚಾರ್, ಡಿ.ಓ.ಸಿ., ಶ್ರೀ ಬಿ.ಎನ್. ಕಿರಣ್ ಕುಮಾರ್, ತಾಲ್ಲೂಕು ಸಂಯೋಜಕರಾದ ಶ್ರೀ ಬಿ.ಎಲ್. ಮೋಹನ್ ಮತ್ತು ನಗರದ ಕಾಲೇಜುಗಳ ರೋವರ್ಸ್ ಮತ್ತು ರೇಂಜರ್ಸ್ ಹಾಗೂ ಘಟಕದ ನಾಯಕರುಗಳು ಭಾಗವಹಿಸಿದ್ದರು.

## ತುಮಕೂರು

ದಿನಾಂಕ 25-02-2014 ರಂದು ತುರುವೇಕೆರೆ ತಾಲ್ಲೂಕು ರ‍್ಯಾಲಿಯನ್ನು ನಡೆಸಲಾಯಿತು. ಅಧ್ಯಕ್ಷತೆಯನ್ನು ಶ್ರೀ ಧನಪಾಲ್ ರವರು ವಹಿಸಿದ್ದರು. ಕಾರ್ಯಕ್ರಮ ಉದ್ಘಾಟನೆಯನ್ನು ಬಿ.ಇ.ಒ., ಶ್ರೀ ರಂಗಧಾಮಯ್ಯನವರು ನೆರವೇರಿಸಿದರು. ಜಿಲ್ಲಾ ಪಂಚಾಯತ್ ಸದಸ್ಯರು ತಾಲ್ಲೂಕು ಪಂಚಾಯತ್ ಸದಸ್ಯರು ಗ್ರಾಮಪಂಚಾಯತ್ ಅಧ್ಯಕ್ಷರು, ಸದಸ್ಯರು, ಎಸ್.ಡಿ.ಎಂ.ಸಿ. ಅಧಿಕಾರಿಗಳು ಕಾಲೇಜಿನ ಪ್ರಾಂಶುಪಾಲರು ಅಧಿಕಾರಿ ವರ್ಗದವರು ಹಾಗೂ ಹಿರಿಯ ನಾಗರಿಕರು ಭಾಗವಹಿಸಿ ರ‍್ಯಾಲಿಯನ್ನು ಯಶಸ್ವಿಗೊಳಿಸಿದರು. 240 ಸ್ಕೌಟ್ಸ್-ಗೈಡ್ಸ್ ಕಬ್ಸ್-ಬುಲ್ ಬುಲ್ಸ್, 20 ಸ್ಕೌಟ್-ಗೈಡ್ ಶಿಕ್ಷಕರು ಜಿಲ್ಲಾ ಸಂಸ್ಥೆಯಿಂದ ಡಿ.ಟಿ.ಸಿ. ಮತ್ತು ಡಿ.ಓ. ಭಾಗವಹಿಸಿದ್ದರು.

********

ದಿನಾಂಕ 05-03-2014 ರಂದು ಗುಬ್ಬಿ ತಾಲ್ಲೂಕಿನಲ್ಲಿ ಶಿಕ್ಷಕರ ಸಮಾವೇಶವನ್ನು ನಡೆಸಲಾಯಿತು. ಸಮಾವೇಶದ ಅಧ್ಯಕ್ಷತೆಯನ್ನು ಶ್ರೀ ಶಿವಕುಮಾರ್ ಜಿ.ಆರ್. ಇವರು ವಹಿಸಿದ್ದರು. ಉದ್ಘಾಟನೆಯನ್ನು ಬಿ.ಇ.ಒ., ಶ್ರೀ ಬಸವರಾಜುರವರು ನಡೆಸಿಕೊಟ್ಟರು. ಸ್ಥಳೀಯ ಸಂಸ್ಥೆಯ ಪದಾಧಿಕಾರಿಗಳು ಭಾಗವಹಿಸಿದ್ದರು. ಜಿಲ್ಲಾ ಸಂಸ್ಥೆಯಿಂದ ಶ್ರೀ ವೇಣುಗೋಪಾಲ್ ಕೃಷ್ಣ, ಜಿಲ್ಲಾ ಆಯುಕ್ತರು (ಸ್ಕೌಟ್) ಇನ್ನೂ ಹೆಚ್ಚಿನ ಸ್ಕೌಟ್-ಗೈಡ್ ಶಿಕ್ಷಕರುಗಳು ದಳಗಳನ್ನು ರಚಿಸುವ ಬಗ್ಗೆ ಮಾತನಾಡಿದರು. ಹಾಗೂ ಡಿ.ಒ. ಶ್ರೀ ಕರಿಸಿದ್ದಪ್ಪನವರು ದಳ ರಚನೆ ಮಾಡುವ ಬಗ್ಗೆ ಮತ್ತು ಮಕ್ಕಳ ಮುಂದಿನ ಸ್ಕೌಟ್-ಗೈಡ್ ಚಟುವಟಿಕೆಗಳ ಬಗ್ಗೆ ತಿಳಿಸಿಕೊಟ್ಟರು. ಕಾರ್ಯದರ್ಶಿ ಶ್ರೀ ಹುಚ್ಚಪ್ಪನವರು ವಂದಿಸಿದರು.

*********

ದಿನಾಂಕ 17-03-2014 ರಿಂದ 19-03-2014 ರ ವರೆಗೆ ರೋವರ್ಸ್-ರೇಂಜರ್ಸ್‌ಗಳಿಗೆ ಜಿಲ್ಲಾ ಮಟ್ಟದ ಚಾರಣಾ ಶಿಬಿರ ಮತ್ತು ಸಮುದಾಯ ಸೇವಾ ಕಾರ್ಯಕ್ರಮವನ್ನು ದೇವರಾಯನದುರ್ಗದಲ್ಲಿ ನಡೆಸಲಾಯಿತು. ಈ ಶಿಬಿರದಲ್ಲಿ ನಾಲ್ಕು ಕಾಲೇಜಿನ ಉಪನ್ಯಾಸಕ ವರ್ಗದವರು ಮತ್ತು 100

ರೊವರ್ಸ್-ರೇಂಜರ್ಸ್‌ಗಳು ಭಾಗವಹಿಸಿದ್ದರು. ಈ ಕಾರ್ಯಕ್ರಮದ ಸಮಾರೋಪ ಸಮಾರಂಭದಲ್ಲಿ ಜಿಲ್ಲಾ ಆಯುಕ್ತರು (ಸ್ಕೌಟ್ಸ್) ಶ್ರೀ ವೇಣುಗೋಪಾಲ್ ಕೃಷ್ಣ, ಜಿಲ್ಲಾ ಆಯುಕ್ತರು(ಗೈಡ್ಸ್) ಶ್ರೀಮತಿ ಶುಭಾಷಿಣಿ ಆರ್. ಕುಮಾರ್ ಹಾಗೂ ಕಾರ್ಯದರ್ಶಿ ಶ್ರೀ ಸುರೇಂದ್ರ ಷಾ ರೋವರ್ಸ್ ಘಟಕಗಳ ಬಗ್ಗೆ ಹಾಗೂ ಕರ್ತವ್ಯದ ವಿಷಯವನ್ನು ವಿವರಿಸಿ ಹೇಳಿದರು. ಡಾ॥ ದೀಪಾರವರು ಶಿಬಿರದ ಬಗ್ಗೆ ಕುರಿತು ವಿವರ ನೀಡಿದರು. ರೋವರ್ ರೇಂಜರ್ಸ್‌ಗಳು ಸೇವಾ ಮನೋಭಾವನೆ ಬಗ್ಗೆ ಹಾಗೂ ರೋವರ್ ರೇಂಜರ್ಸ್ ನಿಯಮ ಹೇಗೆ ಪಾಲಿಸಬೇಕು ಎನ್ನುವುದರ ಬಗ್ಗೆ ಶ್ರೀ ಕರಿಸಿದ್ದಪ್ಪನವರು ಡಿ.ಒ. ತಿಳಿಸಿದರು. ಡಾ॥ ನಾಗೇಂದ್ರಪ್ಪನವರು ವಂದಿಸಿದರು.

************

ದಿನಾಂಕ 22-02-2014 ರಂದು ಬಿ.ಪಿ. ರವರ ದಿನಾಚರಣೆಯನ್ನು ನಗರದ ಶ್ರೀ ರೇಣುಕಾ ವಿದ್ಯಾಪೀಠದಲ್ಲಿ ನೆರವೇರಿಸಲಾಯಿತು. ಈ ದಿನಾಚರಣೆ ಅಂಗವಾಗಿ ಸರ್ವಧರ್ಮ ಪ್ರಾರ್ಥನೆಯನ್ನು ಹಮ್ಮಿಕೊಂಡಿದ್ದು ಕಾರ್ಯಕ್ರಮದ ಅಧ್ಯಕ್ಷತೆಯನ್ನು ಜಿಲ್ಲಾ ಗೈಡ್ ಆಯುಕ್ತರಾದ ಶ್ರೀಮತಿ ಶುಭಾಷಿಣಿ ಆರ್. ಕುಮಾರ್ ರವರು ವಹಿಸಿದ್ದರು. 10 ಸ್ಕೌಟ್-ಗೈಡ್ ಶಿಕ್ಷಕರು ಮತ್ತು 280 ಸ್ಕೌಟ್ಸ್-ಗೈಡ್ಸ್‌ಗಳು ದಿನಾಚರಣೆಯಲ್ಲಿ ಭಾಗವಹಿಸಿದ್ದರು.

## ಹಾವೇರಿ

ದಿನಾಂಕ 16-02-2014 ರಿಂದ 17-02-2014 ರ ವರೆಗೆ ಶಿಗ್ಗಾಂವ ತಾಲೂಕ ಸರಕಾರಿ ಹಿರಿಯ ಪ್ರಾಥಮಿಕ ಶಾಲೆ ಕೃಷ್ಣಾಪುರದಲ್ಲಿ ಸ್ಕೌಟ್-ಗೈಡ್ ಮೇಳ ಜರುಗಿತು. ಮೇಳದ ಉದ್ಘಾಟನೆಯನ್ನು ಜಿಲ್ಲಾ ಪಂಚಾಯತ್ ಸದಸ್ಯರಾದ ಶ್ರೀ ರವಿಯವರು ನೆರವೇರಿಸಿದರು. ಕಾರ್ಯಕ್ರಮದಲ್ಲಿ ಶ್ರೀ ಪಟ್ಟಣಶೆಟ್ಟಿ ತಾಲೂಕಾ ದೈಹಿಕ ಶಿಕ್ಷಣಾಧಿಕಾರಿಗಳು, ಶಾಲೆಯ ಎಸ್.ಡಿ.ಎಂ.ಸಿ. ಅಧ್ಯಕ್ಷರು ಹಾಗು ಸದಸ್ಯರು ಭಾಗವಹಿಸಿದ್ದರು. ಕಾರ್ಯಕ್ರಮದಲ್ಲಿ 210 ಸ್ಕೌಟ್ಸ್ ಮತ್ತು 170 ಗೈಡ್ಸ್‌ಗಳು ಭಾಗವಹಿಸಿದ್ದರು. 23 ಸ್ಕೌಟ್ಸ್ ಮಾಸ್ಟರ್ ಮತ್ತು 19 ಗೈಡ್ಸ್ ಕ್ಯಾಪ್ಟನ್ನರು ಭಾಗವಹಿಸಿದ್ದರು. ಮನರಂಜನಾ ಆಟಗಳು, ಸಾಹಸಮಯ ಚಟುವಟಿಕೆ ರಸಪ್ರಶ್ನೆ ಕಾರ್ಯಕ್ರಮ, ಡ್ರಾಯಿಂಗ್ ಕಾಂಪೀಟೇಶನ್ ಮುಂತಾದ ಚಟುವಟಿಕೆಗಳನ್ನು ಹಮ್ಮಿಕೊಳ್ಳಲಾಗಿತ್ತು. ಮೇಳದ ನಾಯಕರಾಗಿ ಡಿ.ಓ.ಸಿ., ಶ್ರೀ ಎ.ಎಲ್. ಶೇಖಸೂರಣಗಿ ಯಶಸ್ವಿಗೊಳಿಸಿದರು.

*************

ದಿನಾಂಕ 06-02-2014 ರಿಂದ 07-02-2014 ರ ವರೆಗೆ ರಾಣಿಬೆನ್ನೂರ ತಾಲ್ಲೂಕ ಮೇಳವು ಸರ್ಕಾರಿ ಹಿರಿಯ ಪ್ರಾಥಮಿಕ ಶಾಲೆ, ಕರ್ಜಗಿಯಲ್ಲಿ ನಡೆಯಿತು. ಕಾರ್ಯಕ್ರಮದಲ್ಲಿ 243 ಸ್ಕೌಟ್ಸ್ ಮತ್ತು 190 ಗೈಡ್ಸ್‌ಗಳು ಭಾಗವಹಿಸಿದ್ದರು. 24 ಸ್ಕೌಟ್ಸ್ ಮಾಸ್ಟರ್ ಮತ್ತು 20 ಗೈಡ್ ಕ್ಯಾಪ್ಟನ್ನರು ಭಾಗವಹಿಸಿದ್ದರು. ಮೇಳದ ನಾಯಕರಾಗಿ ಶ್ರೀ ಎ.ಎಲ್. ಶೇಖಸೂರಣಗಿ ಮತ್ತು ಶ್ರೀಮತಿ ಉಮಾ ಮರಿಗೆಂಚಣ್ಣನವರ ಭಾಗವಹಿಸಿದ್ದರು.

**************

ದಿನಾಂಕ 16-02-2014 ರಿಂದ 17-02-2014 ರ ವರೆಗೆ ಹಾನಗಲ್ ತಾಲೂಕ ಸರಕಾರಿ ಹಿರಿಯ ಪ್ರಾಥಮಿಕ ಶಾಲೆ ಕೆಲವರಕೊಪ್ಪದಲ್ಲಿ ಸ್ಕೌಟ್-ಗೈಡ್ ಮೇಳ ಜರುಗಿತು ಮೇಳದ ಉದ್ಘಾಟನೆಯನ್ನು ಕ್ಷೇತ್ರ ಶಿಕ್ಷಣಾಧಿಕಾರಿಗಳಾದ ಶ್ರೀ ಪ್ರಭುಸುಣಗಾರ ನೆರವೇರಿಸಿದರು. ಕಾರ್ಯಕ್ರಮದಲ್ಲಿ ಶಾಲೆಯ ಎಸ್.ಡಿ.ಎಂ.ಸಿ. ಅಧ್ಯಕ್ಷರು ಹಾಗು ಸದಸ್ಯರು ಭಾಗವಹಿಸಿದ್ದರು.

ಕಾರ್ಯಕ್ರಮದಲ್ಲಿ 180 ಸ್ಕೌಟ್ಸ್ ಮತ್ತು 150 ಗೈಡ್ಸ್‌ಗಳು ಭಾಗವಹಿಸಿದ್ದರು. 18 ಸ್ಕೌಟ್ಸ್ ಮಾಸ್ಟರ ಮತ್ತು 13 ಗೈಡ್ಸ್ ಕ್ಯಾಪ್ಟನ್ನರು ಭಾಗವಹಿಸಿದ್ದರು. ಮೇಳದ ನಾಯಕರಾಗಿ ಶ್ರೀ ಎಂ.ಆರ್. ಪಾಟೀಲ ಮತ್ತು ಶ್ರೀಮತಿ ಉಮಾ ಮರಿಗೆಂಚಣ್ಣನವರ ಭಾಗವಹಿಸಿದ್ದರು.

## ಕೊಪ್ಪಳ

ದಿನಾಂಕ 12–03–2014 ರಿಂದ 13–03–2014 ರ ವರೆಗೆ ನಿವೇದಿತಾ ಪ್ರೌಢಶಾಲೆಯಲ್ಲಿ ಸ್ಕೌಟ್ಸ್–ಗೈಡ್ಸ್ ಗಳಿಗೆ ತರಬೇತಿಯನ್ನು ನಡೆಸಲಾಯಿತು. 20 ಸ್ಕೌಟ್ಸ್ ಹಾಗು 20 ಗೈಡ್ಸ್‌ಗಳು ಭಾಗವಹಿಸಿದ್ದರು.

ಇದರಲ್ಲಿ ಪ್ರವೇಶ್ ಪ್ರಥಮ ಸೋಪಾನ ಮತ್ತು ದ್ವಿತೀಯ ಸೋಪಾನದ ವಿಷಯಗಳ ಬಗ್ಗೆ ವಿವರವಾಗಿ ಮಾಹಿತಿಯೊಂದಿಗೆ ತರಬೇತಿಯನ್ನು ನೀಡಲಾಯಿತು. ಇದರಲ್ಲಿ ಶ್ರೀ ಎ.ಎಸ್. ಶಿವುಕುಮಾರ್ ಎ.ಎಸ್.ಓ.ಸಿ., ಭಾಗವಹಿಸಿದ್ದರು.

***********

ದಿನಾಂಕ 28–03–2014 ರಿಂದ 30–03–2014 ರ ವರೆಗೆ ಎಕ್ಸೆಲ್ ಪಬ್ಲಿಕ್ ಶಾಲೆ ಕನಕಗಿರಿ, ಗಂಗಾವತಿ ತಾಲ್ಲೂಕಿನಲ್ಲಿ ಜಿಲ್ಲಾ ಮಟ್ಟದ ವೃತೀಯ ಚರಣ್ ಪರೀಕ್ಷಾ ಶಿಬಿರವನ್ನು ನಡೆಸಲಾಯಿತು. ಇದರ ನಾಯಕರಾಗಿ ಶ್ರೀ ವೆಂಕಟೇಶ ರೆಡ್ಡಿ, ಹೆಚ್.ಡಬ್ಲ್ಯೂ.ಬಿ.(ಸಿ.) ವಹಿಸಿದ್ದರು.

***********

ದಿನಾಂಕ 05–04–2014 ರಂದು ದಿ॥ ಬಾಬು ಜಗಜೀವನರಾವ್ ರವರ ಜಯಂತಿಯನ್ನು ಕ್ಷೇತ್ರ ಶಿಕ್ಷಣಾಧಿಕಾರಿಗಳ ಕಛೇರಿಯಲ್ಲಿ ಆಚರಿಸಲಾಯಿತು. ಶ್ರೀ ಉಮೇಶ ಪೂಜಾರ ಬಿ.ಇ.ಓ., ಕೊಪ್ಪಳ ರವರು ಮಾತನಾಡುತ್ತಾ ಅಂಬೇಡ್ಕರ್ ರವರು ನಡೆದು ಬಂದ ಜೀವನ ಶೈಲಿ ಹಾಗು ಇವರ ಕಾರ್ಯವೈಖರಿ ಬಗ್ಗೆ ತಿಳಿಸಿದರು. ಶ್ರೀ ಎಸ್.ಎನ್. ಪಾಟೀಲ ಸ್ಥಳೀಯ ಸಂಸ್ಥೆ ಖಜಾಂಚಿಗಳು ಹಾಗೂ ಹಲವು ಸ್ಕೌಟ್ ಮಾಸ್ಟರರು ಭಾಗವಹಿಸಿದ್ದರು.

**************

ದಿನಾಂಕ 07–04–2014 ರಂದು ಜಿಲ್ಲಾಡಳಿತ ವತಿಯಿಂದ ಏರ್ಪಡಿಸಿದ್ದ ವಿಶ್ವ ಆರೋಗ್ಯ ದಿನಾಚರಣೆಯ ಮೆರವಣಿಗೆಯಲ್ಲಿ ಸ್ಕೌಟ್ ಮಾಸ್ಟರರು ಹಾಗೂ ಕೊಪ್ಪಳ ಸ್ಥಳೀಯ ಸಂಸ್ಥೆ ಖಜಾಂಚಿ, ಶ್ರೀ ಎಸ್.ಎನ್. ಪಾಟೀಲ ಹಾಗೂ ಶ್ರೀ ಎ.ಎಸ್. ಶಿವುಕುಮಾರ ಎ.ಎಸ್.ಓ.ಸಿ., ಭಾಗವಹಿಸಿದ್ದರು.

## ದಕ್ಷಿಣ ಕನ್ನಡ

ದಿನಾಂಕ 04–03–2014 ರಿಂದ 10–03–2014 ರ ವರೆಗೆ ದಕ್ಷಿಣ ಕನ್ನಡ ಜಿಲ್ಲಾ ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ಜಿಲ್ಲಾ ತರಬೇತಿ ಕೇಂದ್ರ ಪಿಲಿಕುಳ ಇಲ್ಲಿ ಸಂಸ್ಕೃತ ಬಿ.ಎಡ್. ಕಾಲೇಜ್ ಶೃಂಗೇರಿ ಇಲ್ಲಿನ 118 ವಿದ್ಯಾರ್ಥಿ/ನಿಯರಿಗೆ ಸ್ಕೌಟ್ಸ್ ಶಿಕ್ಷಕರ ಪ್ರಾಥಮಿಕ ತರಬೇತಿ ಶಿಬಿರವನ್ನು ಸಂಘಟಿಸಲಾಯಿತು. ಶ್ರೀ ಆನಂದ ಅಡಿಗ ಎಲ್.ಟಿ. (ಸ್ಕೌ), ಶ್ರೀ ಕೊಗ್ಗ ಗಾಣಿಗ ಎಲ್.ಟಿ.(ಸ್ಕೌ) ಶ್ರೀ ಎಂ.ಜೆ. ಕಜೆ, ಎ.ಎಲ್.ಟಿ.(ಸ್ಕೌ) ಶ್ರೀ ಪ್ರತಿಮ್‌ಕುಮಾರ್ ಎಲ್.ಟಿ.(ಸ್ಕೌ) ರವರ ನಾಯಕತ್ವದಲ್ಲಿ ತರಬೇತಿ ನಡೆಯಿತು. ಇವರಿಗೆ ಸಹಾಯಕರಾಗಿ ಶ್ರೀ ಯು.ಜೆ.ಕೆ. ಭಟ್ ಎಲ್.ಟಿ.(ಸ್ಕೌ) ಶ್ರೀ ಎಂ. ಪ್ರಭಾಕರ್ ಭಟ್, ಎಲ್.ಟಿ.(ಸ್ಕೌ), ಶ್ರೀ ಬಿ.ಎಂ. ತುಂಬೆ, ಎ.ಎಲ್.ಟಿ.(ಸ್ಕೌ) ರವರು ಸಹಕರಿಸಿದರು. ಇದೇ ಸಂದರ್ಭದಲ್ಲಿ ಕಾಲೇಜ್ ಪ್ರಾಂಶುಪಾಲರಾದ

ಡಾ. ಸಚ್ಚಿದಾನಂದ ಉಡುಪ, ಎಚ್.ಓ.ಡಿ, ಡಾ. ಚಂದ್ರಕಾಂತ್, ಕೋಆರ್ಡಿನೇಟರ್, ಶ್ರೀ ಹರಿಪ್ರಸಾದ್ ಭಾಗವಹಿಸಿದ್ದರು.

*************

ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್‌ನ ಸುರತ್ಕಲ್ ಸ್ಥಳೀಯ ಸಂಸ್ಥೆಯ ಸುಮಾರು 200 ಕ್ಕೂ ಮಿಕ್ಕ ಸ್ಕೌಟ್ಸ್ ಗೈಡ್ಸ್, ಕಬ್ಸ್ ಮತ್ತು ಬುಲ್‌ಬುಲ್ಸ್‌ಗಳು ಖಂಡಿಗೆ ಗೋಪಾಲಕೃಷ್ಣ ಪ್ರಭುರವರ ಕೃಷಿ ಕ್ಷೇತ್ರಕ್ಕೆ ಕಾಲ್ನಡಿಗೆಯ ಮೂಲಕ ಟ್ರೆಕ್ಕಿಂಗ್ ಕಾರ್ಯಕ್ರಮದಲ್ಲಿ ಭಾಗವಹಿಸಿದ್ದರು. ಸ್ಥಳೀಯ ಸಂಸ್ಥೆಯ ಉಪಾಧ್ಯಕ್ಷರಾದ ಶ್ರೀ ಶ್ರೀಕಾಂತ ಚಿಪ್‌ಳೂಣ್ಕರ್, ಕಾರ್ಯದರ್ಶಿ ಶ್ರೀ ಎಸ್.ಎಸ್. ಕರಣಿಕ್ ಹಾಗೂ ಸುಮಾರು 20 ಸ್ಕೌಟ್ಸ್-ಗೈಡ್ಸ್, ಕಬ್ಸ್-ಬುಲ್ ಬುಲ್ಸ್ ಶಿಕ್ಷಕ-ಶಿಕ್ಷಕಿಯರು ಈ ಟ್ರೆಕ್ಕಿಂಗ್ ಹಾಗೂ ಕೃಷಿ ಕ್ಷೇತ್ರ ಅಧ್ಯಯನ ಕಾರ್ಯಕ್ರಮದಲ್ಲಿ ಭಾಗವಹಿಸಿದ್ದರು.

ಶತಮಾನದಷ್ಟು ಹಿಂದಿನ ಖಂಡಿಗೆ ಶ್ರೀ ಗೋಪಾಲಕೃಷ್ಣ ಪ್ರಭುಗಳ ಹಿರಿಯರ ಮನೆಯ ಪರಿಸರದಲ್ಲಿ ಶ್ರೀ ಪ್ರಭುರವರು ಸ್ಕೌಟ್ಸ್-ಗೈಡ್ಸ್, ಕಬ್ಸ್-ಬುಲ್‌ಬುಲ್ಸ್‌ಗಳು ಹಾಗೂ ಶಿಕ್ಷಕರನ್ನು ತಮ್ಮ ಮನೆಯಂಗಳದಲ್ಲಿ ಸ್ವಾಗತಿಸಿ ಬೆಳಗಿನ ಉಪಹಾರ, ಪಾನಕಗಳನ್ನು ನೀಡಿ ಉಪಚರಿಸಿದರು. ನಂತರ ಕ್ರಿಮಿಕೀಟಗಳ ಬಾಧೆಗಳಿಲ್ಲದ, ಪ್ಲಾಸ್ಟಿಕ್ ಹಾಗೂ ಕೃತಕಗೊಬ್ಬರಗಳ ಬಳಕೆಯಿಲ್ಲದ ಶುದ್ಧ ಕೃಷಿಯ ನೈಸರ್ಗಿಕ ಪರಿಸರ, ಕಂಬಳದ ಕೋಣ ಹಾಗೂ ಇತರ ಜಾನುವಾರುಗಳು, ಭತ್ತ, ತೆಂಗು, ಬಾಳೆ ಮುಂತಾದ ಬೆಳೆಗಳ ಸ್ಥೂಲ ಪರಿಚಯ ಪಡೆದರು. ಶ್ರೀ ಪ್ರಭುಗಳ ಕುಟುಂಬದವರು ನಡೆಸಿಕೊಂಡು ಬರುತ್ತಿರುವ ಕಂಬಳ, ಯಕ್ಷಗಾನ ಮುಂತಾದ ಜಾನಪದ ಮನೋರಂಜನಾ ಕಾರ್ಯಕ್ರಮಗಳ ಬಗ್ಗೆ ಹಾಗೂ ಭತ್ತದಿಂದ ಅಕ್ಕಿ ತಯಾರಿ ಮಾಡುವ ಮಿಲ್ಲಿನ ಪ್ರಾತ್ಯಕ್ಷಿಕ ಕಾರ್ಯ ಚಟುವಟಿಕೆ, ಭತ್ತದ ತೌಡು ಮತ್ತು ಉಮ್ಮಿಯಿಂದ ನೈಸರ್ಗಿಕ ಗೊಬ್ಬರ ತಯಾರಿ ಮುಂತಾದ ಕೃಷಿ ಚಟುವಟಿಕೆಗಳನ್ನು ವಿದ್ಯಾರ್ಥಿಗಳು ಅಧ್ಯಯನ ಮಾಡಿದರು. ಅಲ್ಲದೆ, ಇಲ್ಲಿಗೆ ಸಮೀಪದಲ್ಲಿದ್ದ (ಮಾಧವನಗರದಲ್ಲಿ) ಮಂಗಳೂರು ಮಹಾನಗರಪಾಲಿಕೆಯ ತ್ಯಾಜ್ಯ ಸಂಸ್ಕರಣ ಘಟಕ, ಶ್ರೀ ಪ್ರಭುಗಳ ಕಂಬಳದ ಗದ್ದೆಗೂ ವಿದ್ಯಾರ್ಥಿಗಳು ಭೇಟಿಯಿತ್ತರು.

ಕೃಷಿ ಕ್ಷೇತ್ರ ಅಧ್ಯಯನ ನಡೆಸಿದ ವಿದ್ಯಾರ್ಥಿ ಮತ್ತು ಶಿಕ್ಷಕರಿಗೆ ಶ್ರೀ ಗೋಪಾಲಕೃಷ್ಣ ಪ್ರಭು ತಮ್ಮ ಮನೆಯಲ್ಲಿ ಆತಿಥ್ಯ ನೀಡಿದರು.

***********

ದಿನಾಂಕ 29-04-2014 ರಿಂದ 30-04-2014 ರ ವರೆಗೆ ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ಕರ್ನಾಟಕ, ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು ನಗರ ಸ್ಥಳೀಯ ಸಂಸ್ಥೆಯ ಸೈಂಟ್ ಆಗ್ನೇಸ್ ಸ್ಪೆಷಲ್ ಸ್ಕೂಲ್ ಹಾಗೂ ನಗರದ ವಿವಿಧ ವಿದ್ಯಾ ಸಂಸ್ಥೆಗಳ ಸ್ಕೌಟ್ಸ್-ಗೈಡ್ಸ್ ಹಾಗೂ ಕಬ್ಸ್-ಬುಲ್‌ಬುಲ್ಸ್ ಮಕ್ಕಳ ಭಾವೈಕ್ಯತಾ ಶಿಬಿರವು ಲೂರ್ಡ್ಸ್ ಸೆಂಟ್ರಲ್ ಸ್ಕೂಲ್ ಬಿಜೈ ಇಲ್ಲಿ ಶ್ರೀ ಜಾರ್ಜ್ (ಸ್ಕೌಟ್ಸ್), ಶ್ರೀ ರತ್ನಾಕರ್ (ಕಬ್), ಶ್ರೀಮತಿ ಸುಫಲಾ (ಗೈಡ್) ಹಾಗೂ ಶ್ರೀಮತಿ ಲತಿಕಾ (ಬುಲ್‌ಬುಲ್ಸ್) ಇವರ ನಾಯಕತ್ವದಲ್ಲಿ ಕಾರ್ಯಕ್ರಮಗಳು ನಡೆದವು.

ಇದೇ ಸಂದರ್ಭದಲ್ಲಿ ಅಗ್ನಿ ಶಾಮಕ ದಳದವರಿಂದ ಹಾಗೂ ರಸ್ತೆ ನಿಯಂತ್ರಣ ಪೋಲೀಸ್ ಸಿಬ್ಬಂದಿಗಳಿಂದ ಪ್ರಾತ್ಯಕ್ಷಿಕೆ ಹಾಗೂ ಮಾಹಿತಿ ನೀಡಲಾಯಿತು. ಮನೋರಂಜನೆಗಾಗಿ ನೆನಪಿನ ಶಕ್ತಿಯ ಆಟಗಳು, ಚಿತ್ರಕಲೆ, ಚಿತ್ರಕ್ಕೆ ಬಣ್ಣ ತುಂಬುವುದು, ಯೋಗಾಸನ ಮತ್ತು ಶಿಬಿರಾಗ್ನಿಯಲ್ಲಿ ಜನಪದ ನೃತ್ಯ ಕಾರ್ಯಕ್ರಮವನ್ನು

ಹಮ್ಮಿಕೊಳ್ಳಲಾಯಿತು. ಸಮಾರೋಪ ಸಮಾರಂಭದಲ್ಲಿ ಜಿಲ್ಲಾ ಆಯುಕ್ತೆ(ಗೈಡ್) ಶ್ರೀಮತಿ ಐರಿನ್ ಡಿಕುನ್ಹ, ಜಿಲ್ಲಾ ಸಹಾಯಕ ಆಯುಕ್ತರಾದ ಶ್ರೀ ವಸಂತ್‌ರಾವ್, ರಾಜ್ಯ ಸಹಸಂಘಟನಾ ಆಯುಕ್ತ ಶ್ರೀ ಎಂ. ಪ್ರಭಾಕರ್ ಭಟ್, ಶ್ರೀ ಜೋಸ್ ಆಲ್ಬುಕರ್ ಉಪಸ್ಥಿತರಿದ್ದರು. ಸ್ಕೌಟರ್ ಕಾವ್ಯ ಸ್ವಾಗತಿಸಿದರು. ಸ್ಕೌಟರ್ ಶ್ರೀ ಕೆ.ಎಸ್. ಪ್ರತಿಮ್‌ಕುಮಾರ್ ಧನ್ಯವಾದ ನೀಡಿದರು. ಗೈಡರ್ ತ್ರಿವೇಣಿಯವರು ಕಾರ್ಯಕ್ರಮ ಸಂಯೋಜಿಸಿದರು.

ವಿದ್ಯಾ ಸಂಸ್ಥೆಯ ಸಂಚಾಲಕರಾದ ರೇ: ಫಾದರ್ ಡಾ. ವಿಕ್ಟರ್ ಮಚೋದೋ ಹಾಗೂ ಪ್ರಾಂಶುಪಾಲರಾದ ಪಾ. ಮೈಕಲ್ ಲೋಬೋ ಎಲ್ಲಾ ರೀತಿಯಲ್ಲಿ ಸಹಕರಿಸಿದರು.

************

ಶ್ರಮಪಟ್ಟು ಎಲ್ಲವನ್ನು ಪಡೆಯುವ ಹವ್ಯಾಸವನ್ನು ವಿದ್ಯಾರ್ಥಿಗಳಿಗೆ ಬಾಲ್ಯದಿಂದಲೇ ಕಲಿಸಿ ಕೊಡುವ ಕೆಲಸವನ್ನು ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ಮಾಡುತ್ತಿದೆ ಎಂದು ದ.ಕ. ಮತ್ತು ಉಡುಪಿ ಜಿಲ್ಲಾ ವ್ಯಾಪ್ತಿಯ ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್‌ನ ರಾಜ್ಯ ಸಹ ಸಂಘಟನಾ ಆಯುಕ್ತ ಶ್ರೀ ಪ್ರಭಾಕರ್ ಭಟ್ ಹೇಳಿದರು. ಅವರು ದ.ಕ ಜಿಲ್ಲಾ ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ಸಂಸ್ಥೆಯ ಮೂಲ್ಕಿ ಸ್ಥಳೀಯ ಸಂಸ್ಥೆಯ ಆಶ್ರಯದಲ್ಲಿ ವಿವಿಧ ಶಿಕ್ಷಣ ಸಂಸ್ಥೆಯ ಆಶ್ರಯದಲ್ಲಿ ವಿವಿಧ ಶಿಕ್ಷಣ ಸಂಸ್ಥೆಗಳ ವಿದ್ಯಾರ್ಥಿಗಳಿಗಾಗಿ ಕಿನ್ನಿಗೋಳಿಯ ರೋಟರಿ ಆಂಗ್ಲ ಮಾಧ್ಯಮ ಶಾಲೆಯ ಆತಿಥ್ಯದಲ್ಲಿ ನಡೆದ ಮೂಲ್ಕಿ ವಲಯ ಮಟ್ಟದ ಸ್ಕೌಟ್ಸ್ ಮತ್ತು ಗೈಡ್ಸ್ ಮೇಳ ಮತ್ತು ಕಬ್ಸ್-ಬಲ್‌ಬುಲ್ಸ್ ಉತ್ಸವ ಉದ್ಘಾಟಿಸಿ ಮಾತನಾಡಿದರು. ಸಮಾರಂಭದ ಅಧ್ಯಕ್ಷತೆಯನ್ನು ರೋಟರಿ ಶಾಲೆಯ ಆಡಳಿತ ಮಂಡಳಿಯ ಕಾರ್ಯದರ್ಶಿ ಶ್ರೀ ಬಾಲಕೃಷ್ಣ ಶೆಟ್ಟಿ ಕಳ್ಳಿಗೆ ಅವರು ವಹಿಸಿದ್ದರು. ಜಿಲ್ಲಾ ಮುಖ್ಯ ಆಯುಕ್ತ ಶ್ರೀ ಎನ್.ಜಿ. ಮೋಹನ್, ಗೈಡ್ಸ್ ಜಿಲ್ಲಾ ಆಯುಕ್ತೆ, ಶ್ರೀಮತಿ ಐರಿನ ಡಿ'ಕುನ್ಹಾ, ಆಯುಕ್ತರಾದ ಶ್ರೀ ರಾಮಶೇಷ ಶೆಟ್ಟಿ ಮತ್ತು ಜಿಲ್ಲಾ ಕೋಶಾಧ್ಯಕ್ಷ ಶ್ರೀ ವಾಸುದೇವ ಬೋಳೂರು, ಶಾಲೆಯ ಪ್ರಾಂಶುಪಾಲ ಶ್ರೀ ಗಿಲ್ಬರ್ಟ್ ಡಿ'ಸೋಜ ಮತ್ತಿತರರು ಉಪಸ್ಥಿತರಿದ್ದರು. ಸ್ಕೌಟ್ಸ್ ಮತ್ತು ಗೈಡ್ಸ್ ಸಂಸ್ಥೆಯ ಜಿಲ್ಲಾ ಸಹಾಯಕ ಆಯುಕ್ತ ಶ್ರೀ ಎಂ. ಸರ್ವೋತ್ತಮ ಅಂಚನ್ ಸ್ವಾಗತಿಸಿದರು.

ಕಿನ್ನಿಗೋಳಿ ಚರ್ಚ್‌ನ ಧರ್ಮಗುರು ಫಾ. ಆಲ್ಪ್ರೆಡ್ ಜೆ. ಪಿಂಟೋ, ಮೂಲ್ಕಿ ಕಾರ್ನಾಡು ಮಸೀದಿಯ ಧರ್ಮಗುರು ಶ್ರೀ ಬಿ.ಎಸ್.ಎಂ. ಮುಸ್ತಾಫ ಹನೀಫ, ಕಾರ್ನಾಡು ಶ್ರೀ ವಿಷ್ಣುಮೂತಿ ದೇವಸ್ಥಾನದ ಪ್ರಧಾನ ಅರ್ಚಕರಾದ ಶ್ರೀ ಹಯಗ್ರೀವ ಪಡಿಲ್ಲಾಯ ಸರ್ವಧರ್ಮ ಧಾರ್ಮಿಕ ಉಪನ್ಯಾಸವಿತ್ತು. ಮಾತಮಾಡಿದರು.

ಸ್ಥಳೀಯ ಸಂಸ್ಥೆಯ ಕಾರ್ಯದರ್ಶಿ ಶ್ರೀ ಹರಿಶ್ಚಂದ್ರ ಎಂ. ಕಾರ್ಯಕ್ರಮ ನಿರೂಪಿಸಿದರು. ಕಿಲ್ಪಾಡಿ ವ್ಯಾಸ ಮಹರ್ಷಿ ವಿದ್ಯಾ ಸಂಸ್ಥೆಯ ಶ್ರೀಮತಿ ಕಾಮಾಕ್ಷಿ ಆರ್. ನಾಯಕ್ ವಂದಿಸಿದರು.

*************

ದಿನಾಂಕ 03-04-2014 ರಂದು ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ವಿಟ್ಲ ಸ್ಥಳೀಯ ಸಂಸ್ಥೆಯ ಸ್ಕೌಟ್ಸ್-ಗೈಡ್ಸ್ ರ್‍ಯಾಲಿ, ಕಬ್ಸ್-ಬುಲ್ ಬುಲ್ಸ್ ಉತ್ಸವ ದ.ಕ.ಜಿ.ಪ. ಮಾ.ಹಿ.ಪ್ರಾ ಶಾಲೆ, ವಿಟ್ಲ ಇಲ್ಲಿ ಸಂಘಟಿಸಲಾಯಿತು. ವಿವಿಧ ಶಾಲೆಗಳಿಂದ ಒಟ್ಟು 400 ಸ್ಕೌಟ್ಸ್, ಗೈಡ್ಸ್, ಬುಲ್‌ಬುಲ್ಸ್ ವಿದ್ಯಾರ್ಥಿಗಳು ಭಾಗವಹಿಸಿದ್ದರು, ಶಿಬಿರದ ಉದ್ಘಾಟನಾ ಸಮಾರಂಭದ ಅಧ್ಯಕ್ಷತೆಯನ್ನು ಸ್ಥಳೀಯ ಸಂಸ್ಥೆಯ ಅಧ್ಯಕ್ಷರಾದ ಶ್ರೀ ಪ್ರಭಾಕರ ಶೆಟ್ಟಿ ವಹಿಸಿದ್ದರು. ಶ್ರೀ ಎನ್.ಜಿ. ಮೋಹನ್ ಜಿಲ್ಲಾ ಮುಖ್ಯ ಆಯುಕ್ತರು ಶಿಬಿರವನ್ನು ಉದ್ಘಾಟಿಸಿದರು. ಶ್ರೀ ರಾಜೇಶ್ ಕುಮಾರ್ ಅಧ್ಯಕ್ಷರು ಶಾಲಾಭಿವೃದ್ಧಿ ಸಮಿತಿ, ಶ್ರೀ ವಾಸುದೇವ ಬೋಳೂರು, ಜಿಲ್ಲಾ ಖಜಾಂಚಿ,

ಶ್ರೀ ಎಂ. ಪ್ರಭಾಕರ್ ಭಟ್ ಸಹಾಯಕ ರಾಜ್ಯ ಸಂಘಟನಾ ಆಯುಕ್ತರು (ಸ್ಕೌಟ್ಸ್) ಶ್ರೀ ವಿಶ್ವನಾಥ ಎಚ್. ಶಾಲಾ ಮುಖ್ಯೋಪಾಧ್ಯಾಯರು, ಶ್ರೀ ಸುದರ್ಶನ್ ಪಡಿಯಾರ್ ಸಹಾಯಕ ಜಿಲ್ಲಾ ಆಯುಕ್ತರು (ಸ್ಕೌಟ್ಸ್) ಸಮೂಹ ಸಂಪನ್ಮೂಲ ವ್ಯಕ್ತಿಗಳಾದ ಶ್ರೀ ಶಿವರಾಮ್ ಭಟ್, ನಾಗರಾಜ್ ಇವರುಗಳು ಮುಖ್ಯ ಅತಿಥಿಗಳಾಗಿ ಉಪಸ್ಥಿತರಿದ್ದರು. ಶ್ರೀ ವಿಶ್ವನಾಥ ಬಿ. ಕಾರ್ಯದರ್ಶಿ ಸ್ಥಳೀಯ ಸಂಸ್ಥೆ ಇವರು ಸ್ವಾಗತಿಸಿದರು. ಶ್ರೀ ಅಬ್ದುಲ್ ಮಜೀದ್ ಸಹಾಯಕ ಸಹಾಯಕ ಕಾರ್ಯದರ್ಶಿ ಧನ್ಯವಾದ ನೀಡಿದರು. ರ್‍ಯಾಲಿಯಲ್ಲಿ ಶ್ರೀಮತಿ ಶಾರದಾ ಎಸ್.ರಾವ್ ಪ್ರಿ.ಎ.ಎಲ್.ಟಿ. (ಸ್ಕೌ) ಶ್ರೀಮತಿ ಜೆಸಿಂತಾ ಸೋಫಿಯಾ ಮಸ್ಕರೇನಸ್ ಎ.ಎಲ್.ಟಿ. (ಕಬ್) ಇವರುಗಳ ನೇತೃತ್ವದಲ್ಲಿ ರ್‍ಯಾಲಿ ಕಾರ್ಯಕ್ರಮಗಳನ್ನು ನಡೆಸಲಾಯಿತು.

ಶಿಬಿರದ ಸಮಾರೋಪ ಸಮಾರಂಭ ಶಾಲಾ ಮುಖ್ಯೋಪಾಧ್ಯಾಯರು ಶ್ರೀ ವಿಶ್ವನಾಥ್ ಎಚ್. ಅವರ ಅಧ್ಯಕ್ಷತೆಯಲ್ಲಿ ಜರುಗಿತು. ಶ್ರೀ ಎಂ. ಪ್ರಭಾಕರ್ ಭಟ್, ಎ.ಎಸ್.ಒ.ಸಿ.,(ಸ್ಕೌ) ಶ್ರೀ ಶಿವರಾಮ್ ಭಟ್ ಸಮೂಹ ಸಂಪನ್ಮೂಲ ವ್ಯಕ್ತಿ ಇವರುಗಳು ಮುಖ್ಯ ಅತಿಥಿಗಳಾಗಿ ಭಾಗವಹಿಸಿ ಶಿಬಿರಾರ್ಥಿಗಳಿಗೆ ಪ್ರಮಾಣ ಪತ್ರ ವಿತರಿಸಿದರು.

## ಮೈಸೂರು

ಹುಣಸೂರು ಪಟ್ಟಣದ ಡಿ. ದೇವರಾಜ ಅರಸು ಸರ್ಕಾರಿ ಪ್ರಥಮ ದರ್ಜೆ ಕಾಲೇಜಿನಲ್ಲಿ ರೋವರ್ಸ್ ಮತ್ತು ರೇಂಜರ್ಸ್ ವಿಭಾಗವನ್ನು ತೆರೆಯಲಾಯಿತು. ಕಾಲೇಜಿನ 34 ವಿದ್ಯಾರ್ಥಿಗಳು ವಿಭಾಗಕ್ಕೆ ಸೇರ್ಪಡೆಗೊಂಡಿದ್ದಾರೆ.

ಎಲ್ಲ ವಿದ್ಯಾರ್ಥಿಗಳಿಗೂ ಸ್ಕೌಟ್ಸ್ ಮತ್ತು ಗೈಡ್ಸ್ ಪ್ರತಿಜ್ಞಾವಿಧಿ ಬೋಧಿಸಿ ಮಾತನಾಡಿದ ಜಿಲ್ಲಾ ಸಂಯೋಜಕ ಶ್ರೀ ಎನ್. ಅಶೋಕ್ ಕುಮಾರ್, ವಿದ್ಯಾರ್ಥಿಗಳಲ್ಲಿ ಶಿಸ್ತು ಹಾಗೂ ಕಾಲೇಜಿನ ಆವರಣದಲ್ಲಿ ಶಿಕ್ಷಣಕ್ಕೆ ಪೂರಕ ವಾತಾವರಣ ನಿರ್ಮಾಣಗೊಳ್ಳುವಲ್ಲಿ ಸ್ಕೌಟ್ಸ್ ಮತ್ತು ಗೈಡ್ಸ್ ಸಹಕಾರಿ ಎಂದರು.

ಕಾಲೇಜಿನ ದೈಹಿಕ ಶಿಕ್ಷಣ ನಿರ್ದೇಶಕ, ರೋವರ್ಸ್ ಸ್ಕೌಟ್ಸ್ ಲೀಡರ್ ಶ್ರೀ ಗಣೇಶ್ ಮಾತನಾಡಿ, ಚಾರಣ ಶಿಬಿರ ಟ್ರಕ್ಕಿಂಗ್ ಸಾಮಾಜಿಕ ಕಳಕಳಿಯನ್ನು ಹೊಂದಿರುವ ಸೇವಾ ಕಾರ್ಯಕ್ರಮಗಳನ್ನು ವಿಭಾಗದಿಂದ ಕೈಗೊಳ್ಳಲಾಗುವುದೆಂದರು.

ಸಹಾಯಕ ರೋವರ್ಸ್ ಲೀಡರ್ ಪ್ರೊ|| ಮೋಹನ್, ಪ್ರಾಂಶುಪಾಲರು ಪ್ರೊ|| ಎಚ್.ಸಿ. ಲೋಹಿತಾಶ್ವ, ಅಧ್ಯಾಪಕ ಶ್ರೀ ಸಿ. ರವಿ ಹಾಗೂ ಇನ್ನಿತರ ಅಧ್ಯಾಪಕರು ಭಾಗವಹಿಸಿದ್ದರು.

*************

ಹುಣಸೂರು ಪಟ್ಟಣದ ಡಿ. ದೇವರಾಜ ಅರಸು ಕಾಲೇಜಿನಲ್ಲಿ ಪ್ರಥಮ ಬಾರಿಗೆ ಅಸ್ತಿತ್ವಕ್ಕೆ ಬಂದಿರುವ ಭಾರತ್ ರೋವರ್ಸ್‌ನ–ರೇಂಜರ್ಸ್ ವಿದ್ಯಾರ್ಥಿಗಳು ಜನರಲ್ಲಿ ಮತದಾನ ಕುರಿತು ಜಾಗೃತಿ ಮೂಡಿಸಲು ಸೈಕಲ್ ಜಾಥಾ ಹಮ್ಮಿಕೊಳ್ಳುವ ಮೂಲಕ ಗಮನ ಸೆಳೆದಿದ್ದಾರೆ. ಸೈಕಲ್ ಜಾಥಾಕ್ಕೆ ಕಾಲೇಜು ಆವರಣದಲ್ಲಿ ಚಾಲನೆ ನೀಡಿದ ಪ್ರಾಂಶುಪಾಲ ಪ್ರೊ|| ಎಚ್.ಸಿ. ಲೋಹಿತಾಶ್ವ ಮಾತನಾಡಿ, ಕಿರಿಯರ ಉತ್ಸಾಹ ಮತ್ತು ಸಾಹಸಭರಿತ ಅಪೇಕ್ಷೆಗಳನ್ನು ಪೂರೈಸಲು ಸರಳವಾಗಿರುವ ಚಟುವಟಿಕೆಗಳು ಸಮಾಜದ ಹಿರಿಯ–ಕಿರಿಯರೆಲ್ಲರ ಮನಸ್ಸಿಗೆ ಬಹುಬೇಗ ತಲುಪುವ ನಿಟ್ಟಿನಲ್ಲಿ ಸಭ್ಯ ಸಮಾಜ ನಿರ್ಮಾಣಕ್ಕೆ ರೋವರ್ಸ್ – ರೇಂಜರ್ಸ್ ಒಂದು ಪರಿಣಾಮಕಾರಿ ಮಾರ್ಗವೆಂದು ಅಭಿಪ್ರಾಯಪಟ್ಟರು.

ಸೈಕಲ್ ಜಾಥಾದಲ್ಲಿ ತಮ್ಮ ಸೈಕಲ್‌ಗಳ ಮುಂಭಾಗದಲ್ಲಿ ಭ್ರಷ್ಟಾಚಾರ ಮುಕ್ತ ಭಾರತ, ಮತ ಚಲಾವಣೆ ಎಲ್ಲರ ಹಕ್ಕು, ಮತ ಮಾರಾಟಕ್ಕಿಲ್ಲ, ಆಮಿಷಕ್ಕೆ ಬಲಿಯಾಗದೆ ಮತ ಹಾಕಿ ನಿಮ್ಮ ಮತ ದೇಶಕ್ಕೆ ಹಿತ ಎಂಬಿತ್ಯಾದಿ ಘೋಷಣೆಗಳುಳ್ಳ ಫಲಕವು ಸಾರ್ವಜನಿಕರ ಗಮನ ಸೆಳೆಯುವಂತಿತ್ತು.

"ಎಲ್ಲಾ ಪಟ್ಟಣ, ಗ್ರಾಮಗಳಲ್ಲಿ ಸೇರುವ ಜನಜಂಗುಳಿ ಹಾಗೂ ಪ್ರಮುಖ ವೃತ್ತಗಳಲ್ಲಿ ಮತದಾನದ ಅರಿವು ಮೂಡಿಸುವುದೇ ನಮ್ಮ ಉದ್ದೇಶ" ಎಂದು ಘಟಕಾಧಿಕಾರಿ ಹಾಗೂ ದೈಹಿಕ ಶಿಕ್ಷಣ ನಿರ್ದೇಶಕ ಶ್ರೀ ಬಿ.ವಿ. ಗಣೇಶ್ ತಿಳಿಸಿದರು. ಕಾರ್ಯಕ್ರಮದಲ್ಲಿ ಸಹಾಯಕ ಘಟಕಾಧಿಕಾರಿ ಶ್ರೀ ರಿಯಾಜ್ ಪಾಷ, ಡಾ॥ ಎ. ಆನಂದ ಹಾಜರಿದ್ದರು.

## ಶಿವಮೊಗ್ಗ

ಜಿಲ್ಲಾ ಮಟ್ಟದ ಸ್ಕೌಟ್-ಗೈಡ್ ಕ್ಯಾಂಪೋರಿಯು ದಿನಾಂಕ 31-01-2014 ರಿಂದ 02-02-2014 ರ ವರೆಗೆ ಜಿಲ್ಲೆಯ ಸಾಗರ ತಾಲ್ಲೂಕಿನ ಅಮಟೆಕೊಪ್ಪದ ಹೊಂಗಿರಣ ಶಾಲೆಯ ಆವರಣದಲ್ಲಿ ನಡೆಯಿತು. ಬೆಳಗ್ಗೆ 7.30ಕ್ಕೆ ಧ್ವಜಾರೋಹಣದೊಂದಿಗೆ ಕ್ಯಾಂಪೂರಿ ಆರಂಭವಾಯಿತು. ಮಧ್ಯಾಹ್ನ ಉದ್ಘಾಟನಾ ಕಾರ್ಯಕ್ರಮದಲ್ಲಿ ರಾಜ್ಯಸಭೆ ಸದಸ್ಯರಾದ ಮಾನ್ಯಶ್ರೀ ಆಯನೂರು ಮಂಜುನಾಥ್, ರ್‍ಯಾಲಿ ಉದ್ಘಾಟಿಸಿ 'ದೇಶದ ಆಂತರಿಕ ಶಕ್ತಿ ಎಂದರೆ ಇಂದಿನ ಯುವಜನ. ಅವರನ್ನು ಸರಿದಾರಿಯಲ್ಲಿ ಕರೆದುಕೊಂಡು ಹೋಗಲು ಇಂತಹ ಚಳವಳಿಗಳು ಹೆಚ್ಚು ಕ್ರಿಯಾಶೀಲವಾಗಿರಬೇಕು. ಸ್ಕೌಟ್-ಗೈಡ್ ಸಂಸ್ಥೆಯು ದೇಶದ ಸಾರ್ವಭೌಮತೆ ಹಾಗೂ ಸಾಮರಸ್ಯವನ್ನು ಕಾಪಾಡುವಲ್ಲಿ ಪ್ರಮುಖ ಪಾತ್ರವಹಿಸುತ್ತಿರುವುದು ಸಂತೋಷದ ಸಂಗತಿ" ಎಂದು ಹರ್ಷ ವ್ಯಕ್ತಪಡಿಸಿದರು.

ಕಾರ್ಯಕ್ರಮದ ಮುಖ್ಯ ಅತಿಥಿಗಳಾಗಿ ಹೆಗ್ಗೋಡು ಗ್ರಾಮ ಪಂಚಾಯಿತಿ ಅಧ್ಯಕ್ಷ ಶ್ರೀ ಎಂ. ನಾಗರಾಜ್ ತಹಸೀಲ್ದಾರ ಶ್ರೀ ಸಾಜಿದ್ ಅಹಮದ್ ಮುಲ್ಲಾ, ತಾಲ್ಲೂಕು ಪಂಚಾಯಿತಿ ಮುಖ್ಯ ಕಾರ್ಯನಿರ್ವಾಹಣಾಧಿಕಾರಿ ಶ್ರೀ ಸಿದ್ಧಪ್ಪ ಜಿಲ್ಲಾ ಸಂಸ್ಥೆಯ ಉಪಾಧ್ಯಕ್ಷರಾದ ಶ್ರೀ ಎಚ್.ಡಿ. ಉದಯಶಂಕರ ಶಾಸ್ತ್ರಿ ಭಾಗವಹಿಸಿದ್ದರು. ಅಧ್ಯಕ್ಷತೆ ವಹಿಸಿದ್ದ ಜಿಲ್ಲಾ ಮುಖ್ಯ ಆಯುಕ್ತರಾದ ಶ್ರೀ ಎಚ್.ಡಿ. ರಮೇಶ್ ಶಾಸ್ತ್ರಿ ರ್‍ಯಾಲಿಯಲ್ಲಿ ಭಾಗವಹಿಸಿದ ಎಲ್ಲರಿಗೂ ಶುಭ ಹಾರೈಸಿದರು.

ಅಂದು ಸಂಜೆ ಜಿಲ್ಲಾ ಸಾಂಸ್ಕೃತಿಕ ವೈಶಿಷ್ಟ್ಯತೆಯ ಪ್ರದರ್ಶನ ನಡೆಯಿತು. ಕಾರ್ಯಕ್ರಮವನ್ನು ಸಾಗರ ನಗರಸಭೆಯ ಆಯುಕ್ತರಾದ ಶ್ರೀ ಬಿ.ಎನ್. ಚಂದ್ರಶೇಖರ್ ಅವರು ಉದ್ಘಾಟಿಸಿ, ಮಕ್ಕಳಲ್ಲಿ ಸಾಂಸ್ಕೃತಿ ಪ್ರಜ್ಞೆ ಬೆಳೆಸಲು ಇಂತಹ ಶಿಬಿರಗಳು ಹೆಚ್ಚಿನ ಸಹಕಾರಿಯಾಗುತ್ತದೆ ಎಂದರು. ಕಾರ್ಯಕ್ರಮದಲ್ಲಿ ಕೆನರಾ ಬ್ಯಾಂಕ್ ಮುಖ್ಯ ವ್ಯವಸ್ಥಾಪಕ ಶ್ರೀ ಬಿ.ಎಸ್. ಪಾವಟೆ, ಹೊಂಗಿರಣ ಶಾಲೆಯ ಪ್ರಾಂಶುಪಲರಾದ ಶ್ರೀಮತಿ ಶೋಭಾ ರವೀಂದ್ರ, ಮುಖ್ಯ ಅತಿಥಿಗಳಾಗಿ ಭಾಗವಹಿಸಿದ್ದರು. ಕಾರ್ಯಕ್ರಮದ ಅಧ್ಯಕ್ಷತೆಯನ್ನು ಜಿಲ್ಲಾ ಸ್ಕೌಟ್ ಆಯುಕ್ತರಾದ ಶ್ರೀ ಉಮೇಶ್ ಶಾಸ್ತ್ರಿ ವಹಿಸಿದ್ದರು. ಅನಂತರದಲ್ಲಿ ಸಾಗರ ನಗರಸಭೆಯ ಆಯುಕ್ತರಾದ ಶ್ರೀ ಬಿ.ಎನ್. ಚಂದ್ರಶೇಖರ್ ಅವರು ತ್ಯಾಜ್ಯ ವಸ್ತುಗಳ ನಿರ್ವಹಣೆ ಕುರಿತ ಪ್ರಾತ್ಯಕ್ಷಿಕೆ ನಡೆಸಿದರು.

ದಿನಾಂಕ 01-02-2014 ರ ಬೆಳಗ್ಗೆ ಸಾಹಸಮಯ ಚಟುವಟಿಕೆಗಳ ಕಾರ್ಯಕ್ರಮವನ್ನು ನಡೆಸಲಾಯಿತು. ಕಾರ್ಯಕ್ರಮದಲ್ಲಿ ಜಿಲ್ಲಾ ಪಂಚಾಯತ್ ಮುಖ್ಯ ಕಾರ್ಯನಿರ್ವಹಣಾಧಿಕಾರಿ ಶ್ರೀ ಶಶಿಕಾಂತ ಸೆಂಥಿಲ್,

ಉಪವಿಭಾಗಾಧಿಕಾರಿ ಶ್ರೀ ಉದಯಕುಮಾರ್ ಶೆಟ್ಟಿ, ಡಿಡಿಪಿಐ ಶ್ರೀ ಬಸವರಾಜಪ್ಪ, ಜಿಲ್ಲಾ ಸಂಸ್ಥೆಯ ಉಪಾಧ್ಯಕ್ಷ ಶ್ರೀ ಗುರುರಾಜ್ ಎಸ್. ಗಿರಿಮಾಜಿ, ಸ್ಥಳೀಯ ಎಡಿಸಿಗಳಾದ ಶ್ರೀ ಸರಸ್ವತಿ ನಾಗರಾಜ್, ಸರ್ವಶಿಕ್ಷಣ ಯೋಜನಾ ಸಮನ್ವಯಾಧಿಕಾರಿ ಕೆ. ಗಣಪತಿ ಹಾಗೂ ಇತರರು ಉಪಸ್ಥಿತರಿದ್ದರು.

ಅಂದು ಮಧ್ಯಾಹ್ನ 4 ಗಂಟೆಗೆ ಪಥಸಂಚಲನ ಕಾರ್ಯಕ್ರಮವನ್ನು, ಶ್ರೀ ಕೃಷ್ಣಮೂರ್ತಿ ವೃತ್ತ ನಿರೀಕ್ಷಕರು ಉದ್ಘಾಟಿಸಿದರು. ಕಾರ್ಯಕ್ರಮದಲ್ಲಿ ಶ್ರೀ ಜಿ.ವಿ. ಕಲ್ಲಾಪುರ ಎಡಿಸಿ ಸಾಗರ, ಶ್ರಿ ವೀರಜ ಕಲ್ಲಾಪುರ ಭಾಗವಹಿಸಿದ್ದರು. ರಾತ್ರಿ ನಡೆದ ಭವ್ಯ ಶಿಬಿರಾಗ್ನಿ ಕಾರ್ಯಕ್ರಮವನ್ನು ರಾಷ್ಟ್ರ ಸಂಸ್ಥೆಯ ಮಾಜಿ ನಿರ್ದೇಶಕರಾದ ಶ್ರೀಮತಿ ಪಿ. ಸರೋಜ ಅವರು ಉದ್ಘಾಟಿಸಿದರು. ಕಾರ್ಯಕ್ರಮದಲ್ಲಿ ರಾಜ್ಯ ಮುಖ್ಯ ಆಯುಕ್ತರಾದ ಶ್ರೀ ಕೊಂಡಜ್ಜಿ ಬ. ಷಣ್ಮುಖಪ್ಪ, ಶ್ರೀ ವೆಂಕಟೇಶ್, ಶ್ರೀಮತಿ ಎಸ್.ಕೆ. ಪ್ರಭಾ ಹಾಜರಿದ್ದರು.

ಅಂದು ಸಂಜೆ ನಡೆದ ಸ್ಕೌಟರ್ ಮತ್ತು ಗೈಡರ್ ಸಮ್ಮೇಳನವನ್ನು ರಾಜ್ಯ ಸಂಸ್ಥೆಯ ರಾಜ್ಯ ಸಂಘಟನಾ ಆಯುಕ್ತರಾದ ಶ್ರೀ ಮಂಜುನಾಥಾಚಾರ್ ಉದ್ಘಾಟಿಸಿದರು. ಮುಖ್ಯ ಅತಿಥಿಗಳಾಗಿ ಜಿಲ್ಲಾ ಮುಖ್ಯ ಆಯುಕ್ತರಾದ ಶ್ರೀ ಎಚ್.ಡಿ. ರಮೇಶ್‌ಶಾಸ್ತ್ರಿ, ಶ್ರೀಮತಿ ಎಸ್.ಕೆ. ಪ್ರಭಾ, ಶ್ರೀ ಆರ್.ಕೆ. ರಾಮಸಿಂಗ್, ಜಿಲ್ಲಾ ಸಂಸ್ಥೆ ಕೋಶಾಧಿಕಾರಿ ಶ್ರೀ ಹೆಚ್. ಪರಮೇಶ್ವರ್, ಎಡಿಸಿ ಭಾಗವಹಿಸಿದ್ದರು. ಕಾರ್ಯಕ್ರಮದ ಅಧ್ಯಕ್ಷತೆಯನ್ನು ಜಿಲ್ಲಾ ಸಂಸ್ಥೆಯ ಕಾರ್ಯದರ್ಶಿ ಶ್ರೀ ಕೆ.ಪಿ. ಬಿಂದುಕುಮಾರ್ ವಹಿಸಿದ್ದರು.

ದಿನಾಂಕ 02-02-2014 ರ ಬೆಳಗ್ಗೆ ಸರ್ವಧರ್ಮ ಪ್ರಾರ್ಥನೆಯ ನಂತರ ಮುಕ್ತಾಯ ಸಮಾರಂಭದಲ್ಲಿ ವಿಧಾನಸಭೆಯ ಅಧ್ಯಕ್ಷರಾದ ಸನ್ಮಾನ್ಯ ಶ್ರೀ ಕಾಗೋಡು ತಿಮ್ಮಪ್ಪನವರು ಭಾಗವಹಿಸಿ ಸ್ಕೌಟ್-ಗೈಡ್‌ಗಳನ್ನು ಉದ್ದೇಶಿಸಿ ಮಾತನಾಡಿದರು. ಸಂಸದ ಶ್ರೀ ಬಿ.ವೈ. ರಾಘವೇಂದ್ರ, ರಾಜ್ಯ ಮುಖ್ಯ ಆಯುಕ್ತರಾದ ಶ್ರೀ ಕೊಂಡಜ್ಜಿ ಬ. ಷಣ್ಮುಖಪ್ಪ, ಉಪವಿಭಾಗಾಧಿಕಾರಿ ಡಾ॥ ಉದಯಕುಮಾರ್ ಶೆಟ್ಟಿ, ತಾಲ್ಲೂಕು ಪಂಚಾಯಿತಿ ಅಧ್ಯಕ್ಷ ಶ್ರೀ ಜಿ.ಸಿ. ಹರೀಶಗುಂಟೆ, ಜಿಲ್ಲಾ ಪಂಚಾಯಿತಿ ಸದಸ್ಯ ಶ್ರೀ ಕಲಗೋಡು ರತ್ನಕರ, ಪುರಸಭೆ ಸದಸ್ಯ ಶ್ರೀ ಶ್ರೀನಿವಾಸ್ ಮುಖ್ಯ ಅತಿಥಿಗಳಾಗಿ ಭಾಗವಹಿಸಿದ್ದರು. ಕಾರ್ಯಕ್ರಮದ ಅಧ್ಯಕ್ಷತೆಯನ್ನು ಜಿಲ್ಲಾ ಮುಖ್ಯ ಆಯುಕ್ತರಾದ ಶ್ರೀ ಎಚ್.ಡಿ. ರಮೇಶ ಶಾಸ್ತ್ರಿ ವಹಿಸಿದ್ದರು.

***************

ದಿನಾಂಕ 24-02-2014 ರಂದು ಜಿಲ್ಲಾ ಪುರಸ್ಕಾರ ಪ್ರಶಸ್ತಿ ಪ್ರದಾನ ಸಮಾರಂಭವು ಶಿವಮೊಗ್ಗ ನಗರದ ಗಾಯತ್ರಿ ಕಲ್ಯಾಣ ಮಂಟಪದ ಆವರಣದಲ್ಲಿ ನಡೆಯಿತು. ಬೆಳಗ್ಗೆ ಬೇಡನ್ ಪೋವೆಲ್‌ರಿಗೆ ಗೌರವ ಸಮರ್ಪಣೆ ನಂತರ ಧ್ವಜಾರೋಹಣದೊಂದಿಗೆ ಆರಂಭವಾದ ಕಾರ್ಯಕ್ರಮದಲ್ಲಿ ಜಿಲ್ಲಾ ಮುಖ್ಯ ಆಯುಕ್ತರಾದ ಶ್ರೀ ಎಚ್.ಡಿ. ರಮೇಶ್ ಶಾಸ್ತ್ರಿ ಭಾಗವಹಿಸಿದ್ದರು. ಜಿಲ್ಲಾ ಆಯುಕ್ತರು (ಸ್ಕೌಟ್) ಆದ ಶ್ರೀ ಎಸ್. ಉಮೇಶ್ ಶಾಸ್ತ್ರಿ ಸ್ವಾಗತಿಸಿದರು. ಜಿಲ್ಲಾಧಿಕಾರಿಗಳಾದ ಶ್ರೀ ವಿಪುಲ್ ಬನ್ಸಲ್, ಭಾ.ಆ.ಸೇ. ರವರು ಕಾರ್ಯಕ್ರಮವನ್ನು ಉದ್ಘಾಟಿಸಿ ಮಾತನಾಡುತ್ತಾ ಮಕ್ಕಳು ಮಾನಸಿಕವಾಗಿ, ದೈಹಿಕವಾಗಿ ಸಧೃಡರಾಗಿ ಸಮಾಜದ ಮುಖ್ಯವಾಹಿನಿಗೆ ಬರಲು

ಪ್ರಾಥಮಿಕ ಹಂತದಲ್ಲಿ ಇಂತಹ ಚಟುವಟಿಕೆಗಳಲ್ಲಿ ಅತ್ಯಂತ ಕ್ರಿಯಾಶೀಲರಾಗಿ ಭಾಗವಹಿಸಿದಾಗ ಮಾತ್ರ ಯಶಸ್ವಿಯಾಗಿ ಮುಂದೆ ಬರುತ್ತಾರೆ. ಎಂದು ತಿಳಿಸಿದರು ಸ್ಕೌಟ್/ಗೈಡ್‌ಗಳಿಗೆ ಜಿಲ್ಲಾ ಪುರಸ್ಕಾರ್ ಹಾಗೂ ಕಬ್ಸ್/ಬುಲ್‌ಬುಲ್ಸ್ ಗಳಿಗೆ ತೃತೀಯ ಚರಣ್ ಪ್ರಶಸ್ತಿ ಪ್ರದಾನ ಮಾಡಿದರು.

ಕಾರ್ಯಕ್ರಮದ ಮುಖ್ಯ ಅತಿಥಿಗಳಾಗಿ ಭಾಗವಹಿಸಿದ್ದ ಶಿವಮೊಗ್ಗ ಸಾ.ಶಿ.ಇ. ಉಪನಿರ್ದೇಶಕರಾದ ಶ್ರೀ ಬಸವರಾಜ್ ಮಾತನಾಡುತ್ತಾ ಜಿಲ್ಲೆಯ ಎಲ್ಲಾ ಶಾಲೆಗಳಲ್ಲೂ ಸ್ಕೌಟ್-ಗೈಡ್ ದಳಗಳನ್ನು ತೆರೆಯಲು ಸೂಚಿಸುವುದಾಗಿ ತಿಳಿಸಿದ್ದರು. ಅಧ್ಯಕ್ಷತೆ ವಹಿಸಿದ್ದ ಜಿಲ್ಲಾ ಮುಖ್ಯ ಆಯುಕ್ತರಾದ ಶ್ರೀ ಎಚ್.ಡಿ. ರಮೇಶ್ ಶಾಸ್ತ್ರಿ ತಮ್ಮ ಭಾಷಣದಲ್ಲಿ ಪ್ರಶಸ್ತಿ ಭಾಜನರಾದವರೆಲ್ಲರಿಗೂ ಶುಭ ಹಾರೈಸಿದರು. ಕಾರ್ಯಕ್ರಮದಲ್ಲಿ ಸರ್ವಶಿಕ್ಷಣ ಅಭಿಯಾನದ ಉಪ ಸಮನ್ವಯಾಧಿಕಾರಿಗಳಾದ ಶ್ರೀ ಕೆ. ಕಣಪತಿ, ಜಿಲ್ಲಾ ಸಂಸ್ಥೆ ಉಪಾಧ್ಯಕ್ಷರುಗಳಾದ ಶ್ರೀ ಉದಯಶಂಕರ್ ಶಾಸ್ತ್ರಿ ಹಾಗೂ ಶ್ರೀ ಗುರುರಾಜ್ ಗಿರಿಮಾಜಿ, ಜಿಲ್ಲಾ ಕೋಶಾಧಿಕಾರಿಗಳಾದ ಶ್ರೀ ಹೆಚ್. ಪರಮೇಶ್ವರ, ಕೆಂದ್ರ ಸ್ಥಾನಿಕ ಆಯುಕ್ತರಾದ ಶ್ರೀ ಆರ್.ಕೆ. ರಾಮ್‌ಸಿಂಗ್, ಶ್ರೀ ಎನ್.ಆರ್. ಪ್ರಕಾಶ್, ಹಾಗೂ ಕು॥ ಪ್ರಿಯಾಂಕ ಹೆಚ್.ಎಂ. ಉಪಸ್ಥಿತರಿದ್ದರು.

ಕಾರ್ಯಕ್ರಮದಲ್ಲಿ 540 ಸ್ಕೌಟ್ಸ್-ಗೈಡ್ಸ್‌ಗಳು ಹಾಗೂ 150 ಕಬ್-ಬುಲ್‌ಬುಲ್‌ಗಳು ಹಾಗೂ ಎಲ್ಲಾ ಸ್ಥಳೀಯ ಕಾರ್ಯದರ್ಶಿಗಳು, ಸ್ಕೌಟ್/ಗೈಡ್ ಶಿಕ್ಷಕ ಶಿಕ್ಷಕಿಯರು ಭಾಗವಹಿಸಿದ್ದರು. ಕಾರ್ಯಕ್ರಮವನ್ನು ಮಲ್ನಾಡ್ ಓಪನ್ ಗ್ರೂಪ್‌ನ ನಾಯಕರಾದ ಶ್ರೀ ಎ.ವಿ.ರಾಜೇಶ್ ಹಾಗೂ ಶ್ರೀ ಕೆ. ರವಿ ಎ.ಡಿ.ಸಿ., ಇವರು ನಿರೂಪಿಸಿದರು.

## ಚಿಕ್ಕಬಳ್ಳಾಪುರ

ದಿನಾಂಕ 29-03-2014 ರಂದು ಚಿಕ್ಕಬಳ್ಳಾಪುರ ಜಿಲ್ಲೆ, ಗೌರಿಬಿದನೂರು ತಾಲ್ಲೂಕು ಸರ್ಕಾರಿ ಪ್ರಥಮ ದರ್ಜೆ ಕಾಲೇಜಿನಲ್ಲಿ ರೋವರ್ಸ್ ಮತ್ತು ರೇಂಜರ್ಸ್ ಘಟಕದ ಪ್ರಾರಂಭೋಸತ್ಸವ ಕಾರ್ಯಕ್ರಮವನ್ನು ಹಮ್ಮಿಕೊಳ್ಳಲಾಗಿತ್ತು. ಕಾರ್ಯಕ್ರಮದಲ್ಲಿ ಅಧ್ಯಕ್ಷತೆಯನ್ನು ಕಾಲೇಜಿನ ಪ್ರಾಂಶುಪಾಲರಾದ ಶ್ರೀ ಹನುಮಂತರೆಡ್ಡಿರವರು ವಹಿಸಿದ್ದರು. ಶ್ರೀ ಎನ್. ಶ್ರೀನಿವಾಸನ್ ಎಲ್.ಟಿ. (ಸ್ಕೌಟ್ಸ್) ಚಿಕ್ಕಬಳ್ಳಾಪುರ ಜಿಲ್ಲಾ ಸಂಯೋಜಕರು ಮತ್ತು ರಾಜ್ಯ ಸ್ಥಾನಿಕ ಆಯುಕ್ತರು (ಪ್ರಕಟಣೆ) ಇವರು ದೀಪ ಬೆಳಗಿಸುವುದರ ಮುಖಾಂತರ ಉದ್ಘಾಟನೆ ಮಾಡಿದರು. ಇದರ ನೆನಪಿಗಾಗಿ ಗಿಡ ನೆಡಲಾಯಿತು. ಅವರು ಮಾತನಾಡುತ್ತಾ ಶಿಸ್ತು, ಸಮಯ ಪರಿಪಾಲನೆ ಹಾಗೂ ಸಮಾಜ ಅಭಿವೃದ್ಧಿಗಾಗಿ ರೋವರ್ಸ್ ಮತ್ತು ರೇಂಜರ್ಸ್‌ಗಳ ಪಾತ್ರ ಬಹಳ ಮುಖ್ಯವಾಗಿದೆಯೆಂದು ಹಿತನುಡಿಗಳನ್ನು ಹೇಳಿದರು. ಕಾರ್ಯಕ್ರಮದಲ್ಲಿ ರೋವರ್ ಲೀಡರ್ ಶ್ರೀ ಪ್ರವೀಣ್ ಕುಮಾರ್, ರೇಂಜರ್ ಲೀಡರ್ ಡಾ॥ ರಾಧಿಕಾ ರವರು ಕಾರ್ಯಕ್ರಮದ ನೇತೃತ್ವ ವಹಿಸಿದ್ದರು. ಅಧ್ಯಕ್ಷತೆ ವಹಿಸಿದ್ದ ಶ್ರೀ ಹನುಮಂತರೆಡ್ಡಿಯವರು ಮಾತನಾಡುತ್ತಾ ಸ್ಕೌಟಿಂಗ್-ಗೈಡಿಂಗ್ ಚಟುವಟಿಕೆಯನ್ನು ತಮ್ಮ ಅಧಿಕಾರಾವಧಿಯಲ್ಲಿ ಪ್ರಾರಂಭಿಸಿದ ತೃಪ್ತಿ ತಂದಿದೆ. ಇದರ ಸದುಪಯೋಗವನ್ನು ವಿದ್ಯಾರ್ಥಿ-ವಿದ್ಯಾರ್ಥಿನಿಯರು ಪಡೆದುಕೊಳ್ಳಬೇಕೆಂದು ಸೂಚಿಸಿದರು.

............... ಹಿಂದಿನ ಸಂಚಿಕೆಯಿಂದ

ಅಧ್ಯಾಯ – 3 ಶಿಬಿರಾಗ್ನಿ ಉದಂತ ಸಂ–10

# ಕಾರ್ಯಸರಣಿ

## ಶಿಬಿರದಲ್ಲಿ ಅಡಿಗೆ ಮಾಡುವುದು

## (COOKING IN THE CAMP)

### ಅಡಿಗೆ ಮಾಡುವುದು – ನೈರ್ಮಲ್ಯ – ಶಿಬಿರದ ಆಟಗಳು

**ದಿನಸಿ ಚೀಲಗಳು :** ಸೈನ್ಯ ಸೇವೆಯಲ್ಲಿ, ಅನೇಕ ಬಾರಿ, ಬ್ರೆಡ್ಡು, ಬಿಸ್ಕತ್ತುಗಳ ಬದಲಾಗಿ 2 ಹಿಡಿಯಷ್ಟು ಗೋಧಿ ಹಿಟ್ಟು, ಒಂದು ಮಾಂಸದ ತುಂಡು, ಒಂದು ಚಮಚೆ ಉಪ್ಪು, ಒಂದು ಚಮಚೆ ಮೆಣಸು, ಒಂದು ಸೌಟು ಸಕ್ಕರೆ, ಒಂದು ಚಮಚೆ ಅಡಿಗೆ ಸೋಡಾ, ಸಾಕಷ್ಟು ಕಾಫಿಪುಡಿ, ಟೀ ಸೊಪ್ಪು ಹೀಗೆ ಒದಗಿಸುತ್ತಾರೆ. ಈ ಸಾಮಾನುಗಳನ್ನು ಸ್ವೀಕರಿಸುವ ಮತ್ತು ತನ್ನ ನೆಲೆಗೆ ತೆಗೆದುಕೊಂಡು ಹೋಗುವ ರೀತಿಯನ್ನು ನೋಡಲು ತಮಾಷೆಯೆನಿಸುತ್ತದೆ.

ನೀವು ಹೇಗೆ ಮಾಡುತ್ತೀರಿ? ಎಲ್ಲಾ ಸಾಮಾನುಗಳನ್ನೂ ಪ್ಯಾಕೇಟ್‌ಗಳಲ್ಲಿ ಹಾಕಿ, ಬೆರ್ರೆಯೊಳಗೆ ಇಟ್ಟುಕೊಂಡು ಒಂದು ಕೈಯಲ್ಲಿ ಹಿಡಿಯುತ್ತೀರಿ. ಮಾಂಸದ ತುಂಡನ್ನು ಮತ್ತೊಂದು ಕೈಯಲ್ಲಿ ಒಯ್ಯುತ್ತೀರಲ್ಲವೇ?

ನೀವು ಷರ್ಟ್ ಧರಿಸಿದ್ದರೆ (ಸಾಮಾನ್ಯವಾಗಿ ಧರಿಸಿರುತ್ತೀರಿ) ಅದಕ್ಕೆ ಜೇಬುಗಳಿಲ್ಲದಿದ್ದರೆ, ಕೆಲವು ಜನರ ಷರ್ಟುಗಳಂತೆ ಅದಕ್ಕೂ ಎರಡೇ ಕೈಗಳಿದ್ದರೆ, ಅದು ಕಷ್ಟದ ಕೆಲಸವೇ ಸರಿ.

ಸಂದರ್ಭಕ್ಕೆ ತಕ್ಕಂತೆ ಹೊಂದಿಕೊಳ್ಳುವ, ನುರಿತ ಹಿರಿಯನಾದರೆ, 3 ಸಣ್ಣ ಚೀಲಗಳನ್ನು ಅವನ ಷರ್ಟ್‌ನ ತೋಳುಗಳು ಮತ್ತು ಕರವಸ್ತ್ರ ಇತ್ಯಾದಿಗಳಿಂದ ಸ್ಥಳದಲ್ಲೇ ಮಾಡಿಕೊಂಡು ಒಂದರಲ್ಲಿ ಗೋಧಿ ಹಿಟ್ಟು, ಅಡಿಗೆ ಸೋಡಾ; ಇನ್ನೊಂದರಲ್ಲಿ ಉಪ್ಪು ಮತ್ತು ಮೆಣಸು; ಮೂರನೆಯದರಲ್ಲಿ, ಕಾಫಿ, ಟೀ, ಸಕ್ಕರೆ ಹಾಕಿಕೊಂಡು ಹಾಯಾಗಿ ನಡೆಯುತ್ತಾನೆ.

ಕೆಲವು ವೇಳೆ ಅಡಿಗೆ ಸಾಮಾನುಗಳನ್ನು ಸ್ವೀಕರಿಸಿದ ಕೆಲವೇ ನಿಮಿಷಗಳಲ್ಲಿ ಮುಂದಕ್ಕೆ ಹೊರಡಲು ಕರೆ ಬರುತ್ತಿತ್ತು. ಅಂತಹ ಒಂದು ನಿಮಿಷದಲ್ಲಿ ಹೇಗೆ ರೊಟ್ಟಿಯನ್ನು ಮಾಡಿಕೊಂಡೆವೆಂದು, ಕುತೂಹಲವೇ?

ಹಿಟ್ಟನ್ನು ನೀರಿನಲ್ಲಿ ಅಂಬಲಿಯಂತೆ ಕಲಸಿ ಕುಡಿದುಬಿಟ್ಟೆವು. ಮುಂದಕ್ಕೆ ಹೊರಟೆವು. ಹಿಟ್ಟಿನ ಉದ್ದೇಶ ಸಫಲವಾಯಿತು. ಹೊಟ್ಟೆ ತುಂಬಿತು. ಕೆಲಸವಾಯಿತು. ಮತ್ತೇನು ?

## ಸ್ವಚ್ಛತೆ (Cleanliness)

ಒಂದು ಅಂಶವು ನಿಮ್ಮ ಗಮನದಲ್ಲಿರಲಿ, ಶಿಬಿರದಲ್ಲಿ ನೀವು ಖಾಯಿಲೆಬಿದ್ದರೆ, ಅದು ಪೂರ್ಣವಾಗಿ, ನಿಮ್ಮದೇ ತಪ್ಪಾಗುತ್ತದೆ. ನೀವು ಒಳ್ಳೆಯ ಸ್ಕೌಟ್ ಅಲ್ಲವೆಂದು ತಿಳಿಸುತ್ತದೆ. ಎಲ್ಲಕ್ಕೂ ಹೆಚ್ಚಾಗಿ ಇತರರಿಗೆ ತೊಂದರೆ ಆಗುತ್ತದೆ. ಖಾಯಿಲೆಗೆ ಕಾರಣವೇನು? ನೀವು ಒದ್ದೆ ಬಟ್ಟೆಯನ್ನು ಬದಲಾಯಿಸದಿರಬಹುದು; ನಿಮ್ಮ ಆಹಾರವು ಕಲ್ಮಷಪೂರಿತವಾಗಿದ್ದಿರಬಹುದು.

ಆದ ಕಾರಣ ಅಡಿಗೆ ಮಾಡುವ ಪಾತ್ರೆಗಳು, ತಟ್ಟೆಗಳು, ಮುಚ್ಚಳಗಳು ಇತ್ಯಾದಿ ವಸ್ತುಗಳನ್ನು, ಎಲ್ಲವನ್ನೂ ಪರಿಶುಭ್ರಗೊಳಿಸಬೇಕು.

ನೊಣಗಳು ರೋಗಕಾರಕ ಸೂಕ್ಷ್ಮ ಜೀವಿಗಳನ್ನು, ತಮ್ಮ ಕಾಲುಗಳಲ್ಲಿ ಹೊತ್ತು, ಆಹಾರವನ್ನು ಕಲುಷಿತಗೊಳಿಸುತ್ತವೆ. ಹೊಲಸು ಜಾಗಗಳೆಂದರೆ, ಚೆಲ್ಲಿ, ಕೊಳೆತು ನಾರುವ ಆಹಾರ ಪದಾರ್ಥಗಳೆಂದರೆ, ನೊಣಗಳಿಗೆ ಪ್ರೀತಿ, ಹೀಗೆ ನೊಣಗಳು ಬಹಳ ಅಪಾಯಕಾರಿ.

ಆದಕಾರಣ, ನೀವು ಶಿಬಿರದ ಆವರಣವನ್ನು ಸಂಪೂರ್ಣವಾಗಿ, ಚೊಕ್ಕಟವಾಗಿಟ್ಟಿರಬೇಕು. ಆಗ ನೊಣಗಳು ಬರುವುದಿಲ್ಲ. ಕಸಕಡ್ಡಿ, ಮುಸುರೆ ಕಲಗಚ್ಚು, ಆಹಾರದ ಚೂರುಗಳು ಇತ್ಯಾದಿ., ಎಲ್ಲವನ್ನೂ ಒಣ ಗುಂಡಿಗಳಲ್ಲಿ ಹಾಕಿ ಮುಚ್ಚಿಬಿಡಬೇಕು.

ಪೆಟ್ರೋಲು ನಾಯಕರುಗಳು ಈ ದಿಶೆಯಲ್ಲಿ ಪೂರ್ಣವಾಗಿ, ಗಮನ ಕೊಡಬೇಕು. ಉಗುಳುವುದು, ಎಂಜಲು ಮಲಮೂತ್ರ ವಿಸರ್ಜನೆ ಈ ಎಲ್ಲಾ ವಿಷಯಗಳಲ್ಲಿಯೂ ಎಚ್ಚರಿಕೆ ವಹಿಸಬೇಕು.

ಇದೇ ಕಾರಣದಿಂದಲೇ ನದಿಗಳು, ವಿಶೇಷವಾಗಿ ಕೆರೆಗಳು, ಮೆಟ್ಟಲು ಬಾವಿಗಳು ಅಥವಾ ಬಹಳಕಾಲ ಉಪಯೋಗಿಸದೆ ಶೇಖರಿಸಿಟ್ಟ ನೀರು ಮತ್ತು ಅದಕ್ಕೆ ಸಂಬಂಧವಿರುವ ಬಾವಿಗಳು ಇವುಗಳ ನೀರನ್ನು, ಬಾಯಾರಿತೆಂದು, ಕಣ್ಣುಮುಚ್ಚಿ ಕುಡಿದುಬಿಡಬಾರದು. ನೀರಿನ ಜೊತೆಗೆ ವಿಷಕ್ರಿಮಿಗಳನ್ನೂ ಸೇವಿಸಿಬಿಡುತ್ತೀರಿ! ಜೋಕೆ!! ನಿಮಗೆ ಶಿಬಿರದಲ್ಲಿ ಕುಡಿಯುವ ನೀರಿಗೆ, ಕೆರೆಯ ನೀರೊಂದೇ ಆಶ್ರಯವೆನ್ನಿ. ಆಗ ಅಂತಹ ಕೆರೆಯ ನೀರಿನಂಚಿನಿಂದ, ಕನಿಷ್ಠ 8 ಸೆಂ.ಮೀ. ಗಳಾಚೆ 90 ಸೆಂ.ಮೀ. ಆಳದ ಗುಂಡಿಯನ್ನು ತೋಡಿಕೊಳ್ಳಿ. ನೀರು ಜಿನುಗಿ, ನಿಮ್ಮ ಸಣ್ಣ ಬಾವಿಯು ತುಂಬುತ್ತದೆ. ಈ ನೀರು, ತುಲನಾತ್ಮಕವಾಗಿ, ಕೆರೆಯ ನೀರಿಗಿಂತಲೂ, ಕುಡಿಯಲು ಶುದ್ಧವಾಗಿರುತ್ತದೆ.

ಬೋಯರ್‌ಗಳು ನಮ್ಮ ಕುಡಿಯುವ ನೀರಿನ ಸರಬರಾಜನ್ನು, ಕತ್ತರಿಸಿ ಹಾಕಿದಾಗ, ಮೆಫೆಕಿಂಗ್‌ನಲ್ಲಿ ನಾವು ಹಾಗೇ ಮಾಡಿದೆವು. ಆದ್ದರಿಂದ ನಮಗೆ, ಕೆಟ್ಟ ನೀರಿನಿಂದ ಬರುವ ಖಾಯಿಲೆಗಳು ಬರಲಿಲ್ಲ.

ದಕ್ಷಿಣ ಅಮೆರಿಕಾದಲ್ಲಿ ಕೆರೆ, ಕಟ್ಟೆಗಳನ್ನೂ; ಸಾಗರ, ಸರಸ್ಸುಗಳನ್ನೂ, ಪರಿಶುದ್ಧಗೊಳಿಸಲು 10 ಲಕ್ಷ ಭಾಗಗಳಿಗೊಂದು ಭಾಗದಂತೆ, ಮೈಲುತುತ್ತ (Copper sulphate) ವನ್ನು ಉಪಯೋಗಿಸುತ್ತಾರೆ.

ಸ್ಕೌಟುಗಳು ಈ ರೀತಿಯಲ್ಲಿ ಯಾವಾಗಲೂ ನಡೆದುಕೊಳ್ಳುವಂತೆ ನೋಡಿಕೊಳ್ಳುವುದು, ಪೆಟ್ರೋಲ್ ಲೀಡರುಗಳ ಜವಾಬ್ದಾರಿಯಾಗಿರುತ್ತದೆ. "ಸ್ಕೌಟು ಪರಿಶುದ್ಧನು" ಎಂಬುದನ್ನು ನೆನಪಿನಲ್ಲಿಡಿ.

.....ಮುಂದುವರೆಯುತ್ತದೆ

# ಕರ್ನಾಟಕ ಸ್ಕೌಟ್ ಮತ್ತು ಗೈಡ್

ವಾರ್ತಾಪತ್ರಿಕೆ

# Karnataka Scout & Guide News Magazine




*"Be Prepared."*

*"Be prepared for what?"*

*"Why, for any old thing."*

*- Robert Baden-Powell*


Monthly, Published by
**The Bharat Scouts & Guides, Karnataka**
State Headquarters, Kondajji Basappa Road
Prof. P. Sivashankar Circle, Fort
Bangalore-560 002. Tel : 26701227




**ಸಂಚಿಕೆಯ ವಾರ್ಷಿಕ ಚಂದಾ ರೂ.100/-**
**ವಿದ್ಯಾಸಂಸ್ಥೆ ಹಾಗೂ ಸಂಘಸಂಸ್ಥೆಗಳಿಗೆ**
**ವಾರ್ಷಿಕ ಚಂದಾ ರೂ. 100/-**

ಚಂದಾಹಣವನ್ನು
ರಾಜ್ಯ ಕಾರ್ಯದರ್ಶಿ ಹಾಗೂ ಸಂಪಾದಕರು
ಕರ್ನಾಟಕ ಸ್ಕೌಟ್ ಮತ್ತು ಗೈಡ್ ಮಾಸಪತ್ರಿಕೆ
ಕೇಂದ್ರ ಕಛೇರಿ, ಕೊಂಡಜ್ಜಿ ಬಸಪ್ಪ ರಸ್ತೆ,
ಪ್ರೊ. ಪಿ. ಶಿವಶಂಕರ್ ವೃತ್ತ, ಕೋಟೆ,
ಬೆಂಗಳೂರು-೫೬೦ ೦೦೨
ಇವರ ವಿಳಾಸಕ್ಕೆ ಮನಿ ಆರ್ಡರ್ (ಎಂ.ಓ)
ಮೂಲಕ ಕಳುಹಿಸಬಹುದು



24–03–2014ರಂದು ಬಿಜಾಪುರ ಜಿಲ್ಲಾ ಸಂಸ್ಥೆ ಕಾರ್ಯಾಲಯದಲ್ಲಿ ನಡೆದ ಸಮಾರಂಭದಲ್ಲಿ ಮೂಲ ತರಬೇತಿ ಪ್ರಮಾಣ ಪತ್ರ, ಸನ್ನದು ಪತ್ರ ವಿತರಣೆ ಕಾರ್ಯಕ್ರಮದಲ್ಲಿ ಬಿಜಾಪುರ ನಗರ ವಲಯದ ಬಿ.ಇ.ಓ ಶ್ರೀಮತಿ ಸಾಹಿರ ಬಾನು ಖಾನುಂ ಮತ್ತು ಗ್ರಾಮೀಣ ವಲಯದ ಬಿ.ಇ.ಓ ಶ್ರೀ ಎಂ.ಜಿ. ಬೆಳ್ಳನವರ, ವಿಷಯ ಪರೀಕ್ಷರಾದ ಶ್ರೀ ನಾಗೇಂದ್ರ ಸಿಂದೂರ, ಕ್ಷೇತ್ರ ಸಮನ್ವಯಾಧಿಕಾರಿ ಶ್ರೀಮತಿ ಗೀತಾ ಕುಲಕರ್ಣಿ, ಜಿ.ಮು.ಆಯುಕ್ತ ಡಾ. ಸತೀಶ್ ಜಿಗಜಿನ್ನಿ ಹಾಗೂ ಇತರರನ್ನು ಕಾಣಬಹುದು.



25–02–2014ರಂದು ತುಮಕೂರು ಜಿಲ್ಲೆ ತುರುವೇಕೆರೆಯಲ್ಲಿ ನಡೆದ ತಾಲ್ಲೂಕು ಮಟ್ಟದ ಸ್ಕೌಟ್ಸ್–ಗೈಡ್ಸ್ ಮೇಳದಲ್ಲಿ ಸ್ಕೌಟ್ಸ್‌ಗಳು ಸಾಹಸಮಯ ಚಟುವಟಿಕೆಯಲ್ಲಿ ಪಾಲ್ಗೊಂಡಿರುವುದು.



18–03–2014 ರಂದು ಬೀದರ್‌ನಲ್ಲಿ ಜರುಗಿದ ಸ್ಕೌಟರ್ಸ್–ಗೈಡರ್ಸ್ ಸಮಾವೇಶದ ಸಂದರ್ಭದಲ್ಲಿ ಸರ್ವಧರ್ಮ ಪ್ರಾರ್ಥನೆಯಲ್ಲಿ ಭಾಗವಹಿಸಿದ ಸ್ಕೌಟರ್ಸ್–ಗೈಡರ್ಸ್‌ಗಳು.



15–03–2014ರಂದು ರಾಯಚೂರು ಸಂಚಾರಿ ಪೋಲಿಸ್ ಠಾಣೆಯವರು ರೇಂಜರ್ಸ್‌ಗಳಿಗೆ ಸಂಚಾರ ನಿಯಂತ್ರಣ ತರಬೇತಿ ನೀಡುತ್ತಿರುವುದು.



ಕಾರವಾರ ಸ್ಥಳೀಯ ಸಂಸ್ಥೆ ಏರ್ಪಡಿಸಿದ್ದ ತಾಲ್ಲೂಕು ಮಟ್ಟದ ರ‍್ಯಾಲಿಯ ಸಂದರ್ಭದಲ್ಲಿ ಸ್ವಚ್ಛತೆಯಲ್ಲಿ ತೊಡಗಿರುವ ಸ್ಕೌಟ್ಸ್–ಗೈಡ್ಸ್‌ಗಳು.



ಹಾಸನ ಜಿಲ್ಲೆ ಅರಸೀಕೆರೆ ತಾಲ್ಲೂಕಿನ ಬಾಗೇಶ್‌ಪುರದ ಸರ್ಕಾರಿ ಹಿರಿಯ ಪ್ರಾಥಮಿಕ ಶಾಲೆಯ ಸ್ಕೌಟ್‌ಗಳು ಹೊರಸಂಚಾರ ಕೈಗೊಂಡಿರುವುದು. ಸ್ಕೌಟ್ ಮಾಸ್ಟರ್ ಶ್ರೀ ಜೆ.ಎಲ್. ಲೀಲಾ ಮಹೇಶ್ವರ್ ಚಿತ್ರದಲ್ಲಿದ್ದಾರೆ.

**Regd. as News Paper (Magazine) RNI No : 13348/1959. Postal Regd. No KA/BGW-549/2012-2014**
**Permitted to Post under WPP System. Vide No.: WPP-87.**
**Posted at: Mail Business Centre, Bangalore GPO on 25, 28 & 30 of every month (No. of Pages : 4+28=32)**

## ವಿವಿಧ ಜಿಲ್ಲೆಗಳಲ್ಲಿ ಜರುಗಿದ ಮತದಾನ ಜಾಗೃತಿ ಕಾರ್ಯಕ್ರಮಗಳ ವಿಹಂಗಮ ನೋಟ



ಚಿಕ್ಕಮಗಳೂರು



ಬೆಳಗಾವಿ





ಉಡುಪಿ



ಶಿರಸಿ



ಹಾಸನ (ಅರಸೀಕೆರೆ)



SCOUTS
Creating a Better World



If not delivered, please return to :
THE EDITOR, Karnataka Scout & Guide
State Headquarters, Kondajji Basappa Road.
Prof. P. Sivashankar Circle, Fort
Bangalore - 560 002. Ph: 080-26701227
e-mail.: shq@scout.org.in

**Published by : The Bharat Scouts & Guides, Karnataka, State Headquarters, Fort, Bangalore - 560 002.**
**Publisher & Editor : M.A. Khalid. Printed by : L. Lingappa, M.D. at Sathyasri Printers Pvt. Ltd.,**
**16/1, 3rd Cross, 2nd Main, Kasturiba Nagar, Mysore Road, Bangalore - 560 026**